# ಹುನಗುಂದ ಪ್ರದೇಶದ ಶಿಲ್ಪಗಳು- ಒಂದು ಅಧ್ಯಯನ

ಇತಿಹಾಸ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಯಕ್ಕೆ
ಸಾದರಪಡಿಸಿದ ಸಂಶೋಧನ ಸಂಪ್ರಬಂಧ


ಸಂಶೋಧಕರು :

**ಯಲ್ಲಪ್ಪ ಎಚ್. ಚಲವಾದಿ**

ವಿ. ವಿ. ಸಂಘದ
ಜಿ. ಎನ್. ಎಸ್. ಸಂ. ಪ. ಪೂರ್ವ ಮಹಾವಿದ್ಯಾಲಯ
ಯಾದವಾಡ

ಮಾರ್ಗದರ್ಶಕರು :

**ಡಾ॥ ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ**
ಎಂ.ಎ. ಪಿಎಚ್.ಡಿ

ಮುಖ್ಯಸ್ಥರು
ಇತಿಹಾಸ ವಿಭಾಗ
ರಾಣಿ ಪಾರ್ವತಿದೇವಿ ಕಲಾ ಮತ್ತು ವಾಣಿಜ್ಯ
ಮಹಾವಿದ್ಯಾಲಯ, ಬೆಳಗಾವಿ




ಚರಿತ್ರೆ ವಿಭಾಗ

**ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ**
**ಹಾರೂಗೇರಿ**

ತಾ॥ ರಾಯಭಾಗ ಜಿ॥ ಬೆಳಗಾವಿ

**ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.**



2012-13

# ಹುನಗುಂದ ಪ್ರದೇಶದ ಶಿಲ್ಪಗಳು- ಒಂದು ಅಧ್ಯಯನ

## ಇತಿಹಾಸ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಸಂಪ್ರಬಂಧ

ಸಂಶೋಧಕರು

**ಯಲ್ಲಪ್ಪ ಎಚ್. ಚಲವಾದಿ**

ವಿ.ವಿ.ಸಂಘದ

ಜಿ.ಎಸ್.ಎಸ್.ಸಂ. ಪ.ಪೂರ್ವ ಮಹಾವಿದ್ಯಾಲಯ

ಯಾದವಾಡ

ಮಾರ್ಗದರ್ಶಕರು

**ಡಾ॥ ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ**

ಎಂ.ಎ ಪಿಎಚ್.ಡಿ

ಮುಖ್ಯಸ್ಥರು

ಇತಿಹಾಸ ವಿಭಾಗ

ರಾಣಿ ಪಾರ್ವತಿದೇವಿ ಕಲಾ ಮತ್ತು ವಾಣಿಜ್ಯ

ಮಹಾವಿದ್ಯಾಲಯ, ಬೆಳಗಾವಿ




ಚರಿತ್ರೆ ವಿಭಾಗ

**ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ**

**ಹಾರೂಗೇರಿ**

**ತಾ॥ ರಾಯಭಾಗ ಜಿ॥ ಬೆಳಗಾವಿ**

**ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ**

**2012-13**

# ಪ್ರಮಾಣ ಪತ್ರ

ಹುನಗುಂದ ಪ್ರದೇಶದ ಶಿಲ್ಪಗಳು- ಒಂದು ಅಧ್ಯಯನ, ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ।। ಶ್ರೀಮತಿ. ಸ್ಮಿತಾ ಪಿ. ಸುರೇಬಾನಕರ,ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರುಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನೆ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಇತಿಹಾಸ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಸಂಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಯಾದವಾಡ
ದಿನಾಂಕ :೨೦-೦೭-೨೦೧೩

**ಯಲ್ಲಪ್ಪ ಎಚ್. ಚಲವಾದಿ**
ಸಂಶೋಧನ ವಿದ್ಯಾರ್ಥಿ
ಶ್ರೀ. ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೋಗೇರಿ

# ಧೃಡೀಕರಣ ಪತ್ರ

ಹುನಗುಂದ ಪ್ರದೇಶದ ಶಿಲ್ಪಗಳು - ಒಂದು ಅಧ್ಯಯನ, ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಶ್ರೀ ಬಿ.ಆರ್. ದರೂರ ಸಂಶೋಧನೆ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಇತಿಹಾಸ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೆಳಗಾವಿ

ದಿನಾಂಕ : ೨೦-೦೭-೨೦೧೩

**ಡಾ|| ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ**

ಮುಖ್ಯಸ್ಥರು

ಇತಿಹಾಸ ವಿಭಾಗ

ರಾಣಿ ಪಾರ್ವತಿದೇವಿ ಕಲಾ ಮತ್ತು ವಾಣಿಜ್ಯ

ಮಹಾವಿದ್ಯಾಲಯ, ಬೆಳಗಾವಿ.

Dr. (MRS.) SMITA P. SUREBANKAR
HOD. Dept. of History
R.P.D. College, BELGAUM

# * ಕೃತಜ್ಞತೆಗಳು *

ವಿದ್ಯಾವರ್ಧಕ ಸಂಘದ ಜಿ.ಎನ್.ಎಸ್. ಸಂಯುಕ್ತ ಪದವಿಪೂರ್ವ ಮಹಾವಿದ್ಯಾಲಯ ಯಾದವಾಡದಲ್ಲಿ ಇತಿಹಾಸ ಉಪನ್ಯಾಸಕನಾಗಿ ಸೇವೆ ಸಲ್ಲಿಸುತ್ತಿರುವ ನಾನು ನನ್ನ ವಯಕ್ತಿಕ ಕಾರಣಾಂತರಗಳಿಂದ ಸಂಶೋಧನೆ ಕ್ಷೇತ್ರದಿಂದ ಹಿಂದುಳಿದಿದ್ದೆ. ವಿ.ವಿ. ಸಂಘದ ಚೇರಮನ್‌ರಾದ ಶ್ರೀ ಬಿ.ಎಮ್. ನ್ಯಾಮಗೌಡರ ಅವರ ಪ್ರೋತ್ಸಾಹ ಪಡೆದು ಎಂ.ಫಿ.ಲ್ ಪದವಿಗಾಗಿ ಸಂಶೋಧನಾ ವಿದ್ಯಾರ್ಥಿಯಾಗಲು ಬಯಸಿದಾಗ ನಮ್ಮ ಆಡಳಿತ ಮಂಡಳಿ ನಿರ್ದೇಶಕರಾದ ಡಾ|| ಎಚ್. ಬಿ. ಹಳೇಮನಿ, ವ್ಹಿ. ಎಲ್.ಕೆಂಜೋಳ, ಎಮ್.ಎಸ್. ಚಿಕ್ಕನ್ನವರ, ಎಮ್.ವಿ. ರೂಢಗಿ, ಬಿ. ಆರ್. ಪಾಟೀಲ, ಆರ್. ಬಿ. ಕಲ್ಯಾಣಿ, ವ್ಹಿ. ವ್ಹಿ. ಕೇರಿ, ಅಪ್ಪಣ್ಣ ಚಿಕ್ಕಲಗೌಡ್ರ.

ಸಹಕಾರದಿಂದ ಹಾರೋಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ನಿರ್ದೇಶಕರಾದ ಡಾ|| ವ್ಹಿ. ಎಸ್. ಮಾಳಿಯವರ ನೆರವಿನಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿ ಸೇರಿದಾಗ ಬಹಳ ಖುಷಿಯಾಯಿತು. ಆದರೆ ಆ ಖುಷಿ ಮುಂದೆ ಉಳಿಯಲಿಲ್ಲ, ಏಕೆಂದರೆ ಪ್ರತಿನಿತ್ಯ ಕ್ಲಾಸಿಗೆ ಬರುವುದು ಕಷ್ಟವಾಯಿತು ಆದರೂ ನಿಭಾಯಿಸಿದೆ. ಮಾರ್ಗದರ್ಶಕರಾದ ಡಾ|| ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ ಇವರು ಆಗಾಗ ಹಸ್ತ ಪ್ರತಿಗಳನ್ನು ತಿದ್ದಿ ಉತ್ತಮ ಮಾರ್ಗದರ್ಶನ ನೀಡಿದರು. ಹಾಗೂ ಪ್ರಥಮ ದರ್ಜೆ ಸಹಾಯಕರಾದ ಎಸ್.ಟಿ. ಘಟ್ನಟ್ಟಿ ಇವರ ಸಹಾಯವನ್ನು ಸ್ಮರಿಸುವೆ.

ನನ್ನ ಸಂಶೋಧನೆಗೆ ಪ್ರೇರಕ ಶಕ್ತಿ ನೀಡಿದ ಜಿ.ಎನ್.ಎಸ್. ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯದ ಪ್ರಾಚಾರ್ಯರಾದ ಶ್ರೀ ಎನ್.ಎಸ್.ಪಂಚಗಾರ ಸಹಾಯಕ್ಕೆ ಚಿರಋಣಿಯಾಗಿದ್ದೇನೆ. ನನ್ನ ವೃತ್ತಿ ಬಾಂಧವರಾದ ಆಯ್.ಬಿ. ಗುಂಡ್ಲೂರ, ಜಿ.ವಿ. ಗುರುಮಠ, ಎಸ್.ಎಸ್. ಕಣಬೂರ ಜಿ. ಸಿ. ಕೋಳ್ಕೊರ. ಇವರೆಲ್ಲರೂ ಸಹಕಾರವನ್ನು ಮರೆಯಲಾರೆ, ಆಗಾಗ ಗ್ರಂಥಾಲಯದ ಪುಸ್ತಕಗಳನ್ನು ಪೂರೈಸುತ್ತಿದ್ದ ಬಿ. ಆರ್. ಮೋಮಿನ ಹಾಗೂ ಬಿ.ಎಲ್. ಹುಂಡರದ, ಎಂ. ವಿ. ಭಜಂತ್ರಿಯವರ ಸಹಾಯ ಸಹಕಾರವನ್ನು ಸ್ಮರಿಸುವೆ.

ನನ್ನ ಸಂಶೋಧನೆಗೆ ಸದಾ ಪ್ರೋತ್ಸಾಹ ನೀಡುತ್ತಿದ್ದ ಮಿತ್ರರಾದ ಜಿ.ಎಚ್. ಕಾಂಬಳೆ, ಎಚ್.ಎಸ್. ಮಾದರ, ಎಸ್.ವ್ಹಿ. ಕಂಬಿ, ಮಹಾಂತೇಶ, ಎಮ್.ವ್ಹಿ. ಬಡಿಗೇರ, ಆರ್.ಎಲ್. ಅರಿಸಿದ್ದಿ ವಿರೇಶ, ತುಂಬಗಿ, ರವೀಂದ್ರ ಯಡಹಳ್ಳಿ, ಶಶಿಧರ ಯಡಹಳ್ಳಿ, ಶಂಕರ ಕಾಳಿಪ್ರಸಾದ, ಚಂದ್ರಶೇಖರ ಜಂಗ್ಲಿ, ಮುತ್ತಣ್ಣ ನಡುವಿನಮನಿ, ಇವರ ಸಹಾಯ ಸಹಕಾರವನ್ನು ಎಂದು ಮರೆಯಲಾರೆ.

ಸಂಶೋಧನಾ ಕಾರ್ಯದಲ್ಲಿ ಆಶೀರ್ವಾದಂತೆ ಯಾವಗಲೂ ಮಾರ್ಗದರ್ಶನ ಮಾಡುತ್ತಿದ್ದ ಮಾವಂದಿರಾದ ಎಸ್.ಆರ್. ಯಡಹಳ್ಳಿ ಹಾಗೂ ಅತ್ತೆ ಜೀಜಾಬಾಯಿ ಸಹೋದರರಾದ ಎಮ್.ವ್ಹಿ. ಕಂಬಾಗಿ, ಸೋದರಿ ಇಂದಿರಾ ಎಸ್. ಯಡಹಳ್ಳಿ, ರಾಮಪ್ಪ ಕಾಳಪನಿ ಇವರೆಲ್ಲರ ಉಪದೇಶ, ಅನುಭವಕ್ಕೆ ಚಿರಋಣಿಯಾಗಿದ್ದೇನೆ. ನಿವೇದಿತಾ, ಪ್ರಿಯಾಂಕ, ವಿಜಯಕುಮಾರ ಇವರ ಸಹಕಾರ ನೆನೆಸುವೆ.

ಮನೆಯಲ್ಲಿ ಮಡದಿ ಗೀತಾ, ಮಕ್ಕಳು ಹರ್ಷಿತಾ, ಸಿಂಚನಾ, ಗೌತಮ್ ಇವರು ತೋರಿದ ಅಪರ್ಣನೀಯ ಆಸ್ಥೆ ಸಹನೆಗಳ ಅಪಾರತೆ ಸಂಶೋಧನೆ ಕಾರ್ಯ ತ್ವರಿತಗತಿಯಿಂದಾಗಲು ಕಾರಣಭೂತರಾಗಿದ್ದಾರೆ ಎಂಬುದನ್ನು ಇಲ್ಲಿ ನೆನೆಯುತ್ತೇನೆ.

ಕ್ಷೇತ್ರ ಕಾರ್ಯದಲ್ಲಿ ಸದಾ ನನ್ನೊಟ್ಟಿಗೆ ಬಂದು ಸಹಾಯಮಾಡಿದ ವಿದ್ಯಾರ್ಥಿ ಮಿತ್ರರಾದ ಶ್ರೀಕಾಂತ ಹೊಸಮನಿ ಹಾಗೂ ಸ್ನೇಹಿತ ಎಸ್. ಆರ್. ಪಾಟೀಲ, ಡಾ॥ ಎಸ್.ಜಿ. ಸಜ್ಜಲಗುಡ್ಡ ಇವರ ಸಹಕಾರ ಸದಾ ನೆನೆಯುವೆ.

ರನ್ನ ಸಂಶೋಧನಾ ಗ್ರಂಥಾಲಯದ ಸಿಬ್ಬಂದಿಗಳು ಪುಸ್ತಕಗಳನ್ನು ಪೂರೈಸಿ ಸಹಕಾರ ನೀಡಿದ್ದಾರೆ. ಹಾಗೂ ದರೂರ ಸಂಶೊಧನ ಗ್ರಂಥಾಲಯ ಸಿಬ್ಬಂದಿಗೆ ನನ್ನ ಕೃತಜ್ಞತಾಪೂರ್ವಕ ನಮನಗಳು.

ಡಿ.ಟಿ.ಪಿ. ಕೆಲಸವನ್ನು ಸೀಮಿತ ಕಾಲಮಿತಿಯೊಳಗೆ ಅಚ್ಚುಕಟ್ಟಾಗಿ ಮಾಡಿಕೊಟ್ಟಿರುವ ಶ್ರೀ ಸಾಯಿ ಕಂಪ್ಯೂಟರ್ಸ್ ಮುಧೋಳ ಇಸ್ಮಾಯೀಲ್ ರಾ. ನದಾಫ ರವರಿಗೆ ಅಂದವಾಗಿ ಮುದ್ರಿಸಿಕೊಟ್ಟದ್ದಕ್ಕೆ ಅವರಿಗೆ ನನ್ನ ಕೃತಜ್ಞತೆಗಳು.

ಸ್ಥಳ : ಯಾದವಾಡ

ದಿನಾಂಕ : ೨೦-೦೭-೨೦೧೩

**ವಾಯ್.ಎಚ್. ಚಲವಾದಿ**

ಇತಿಹಾಸ ಉಪನ್ಯಾಸಕರು

ಜಿ.ಎನ್.ಎಸ್.ಸಂಯುಕ್ತ ಪದವಿ ಪೂರ್ವ

ಮಹಾವಿದ್ಯಾಲಯ, ಯಾದವಾಡ

# ಹುನಗುಂದ ಪ್ರದೇಶದ ಶಿಲ್ಪಗಳು - ಒಂದು ಅಧ್ಯಯನ

## ಪರಿವಿಡಿ

## ಅಧ್ಯಾಯ -ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಆಕರಗಳು ಹಾಗೂ ವೈಧಾನಿಕತೆ

**ಹಿನ್ನಲೆ :**

ಪ್ರಾಚೀನ ಭಾರತದ ವಾಸ್ತು ಶಿಲ್ಪಕಲೆಯ ಪ್ರಮುಖ ಕೇಂದ್ರಗಳಲ್ಲಿ ಭಾರತ ಜನನೀಯ ತನು ಜಾತೆಯಾದ ಈ ಕನ್ನಡ ನಾಡಿನ ವಾಸ್ತು ಶಿಲ್ಪವು ಚಿತ್ರ ವಿಚಿತ್ರವೂ ಆನಂದ ಪ್ರದಾಯಕವೂ ಆದ ಪರಮೇಶ್ವರನು ಸೃಷ್ಠಿ ಶಿಲ್ಪವನ್ನು ಗಮನಿಸಿಯೇ ತೌಕಿಕ ಶಿಲ್ಪವನ್ನು ಮಾನವನು ರೂಪಿಸಿಕೊಂಡಿದ್ದಾನೆ. ಕ್ರಿ.ಪೂ.3ನೇ ಶತಮಾನದಿಂದ ಮೊದಲಗೊಂಡು ವಿಜಯನಗರದ ಪತನದವರೆಗೂ ನಿರ್ಮಾಣಗೊಂಡ ಇಡೀ ಕರ್ನಾಟದ ಪ್ರತಿನೊಂದು ಕಲ್ಲು ಸಹ ತನ್ನ ಕಥೆಯನ್ನು ಸಾರುತ್ತಿತ್ತು ಎಂಬುದು ಈಗಾಗಲೇ ಸುಪರಿಚಿತ. ಮೊಟ್ಟ ಮೊದಲಿಗೆ ಅಶೋಕನ ಕಾಲದಿಂದ ಆರಂಭವಾದ ವಾಸ್ತುಶಿಲ್ಪ ಬೆಳವಣಿಗೆ ಭಾರತದಲ್ಲಿ ಮಾತ್ರ ಪಸರಿಸಿದೆ ಎಷ್ಯಾಖಂಡಕ್ಕೆ ಭಾರತದ ವಾಸ್ತು ಶಿಲ್ಪದ ಕೊಡುಗೆ ಅಮೋಘವಾಗಿದೆ. ಕರ್ನಾಟಕದ ಕಲೆಗೂ ಅಪಾರವಾದ ಒಂದು ಜನಪದೀಯ ಧಾರ್ಮಿಕ, ಹಿನ್ನಲೆ, ಸಾಂಸ್ಕೃತಿಕ ಪರಂಪರೆ ಇದೆ. ಕರ್ನಾಟಕ ವಾಸ್ತು ಶಿಲ್ಪದ ತವರೂರೆಂದು ಹೇಳಿದರೆ ಅತಿ ಸೂಕ್ತಯಾಗಲಿಕ್ಕಿಲ್ಲಾ. ಕಾರಣ ಬದಾಮಿ ಚಾಲುಕ್ಯರ ಕಾಲದಿಂದ ವಿಜಯನಗರದ ಕಾಲದವರೆಗಿನ ನೂರಾರು ದೇವಾಲಯಗಳು ವಿವಿಧ ಭಾಗಗಳಲ್ಲಿದ್ದು, ಕೆಲವು ಜಗತ ಪ್ರಸಿದ್ಧವಾಗಿವೆ. ಬಾಗಲಕೋಟೆ ಜಿಲ್ಲೆಯ ಬದಾಮಿ, ಐಹೋಳೆ, ಪಟ್ಟದಕಲ್ಲು, ಹಾಸನ ಜಿಲ್ಲೆಯ ಬೇಲೂರ, ಹಳೇಬಿಡು, ಬಳ್ಳಾರಿ ಜಿಲ್ಲೆಯ ಹಂಪಿ, ಹಾಗೂ ಸೋಮನಾಥಪೂರ, ಇವು ಶಿಲ್ಪಕಲೆಗೆ ಪ್ರಸಿದ್ಧ ಪಡೆದ ಸ್ಥಳಗಳಾಗಿವೆ. ಅದರಲ್ಲಿ 'ಐಹೋಳೆ, ಭಾರತದ ವಾಸ್ತುಶಿಲ್ಪದ ತೊಟ್ಟಿಲು' ಎಂದು ಹೆಸರಾಗಿದ್ದು, ಸ್ತುತ್ಯಿರ್ಹವಾಗಿದೆ. ಬಹುಶಃ ವಾಸ್ತು ಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಮೂರ್ತಿ ಶಿಲ್ಪಕ್ಕೆ ಲಭಿಸುತ್ತದೆ. ಕ್ರಿ.ಪೂ. ಮೊಟ್ಟ ಮೊದಲಿಗೆ ಅಶೋಕನಿಂದ ಶಾಸನಗಳ ಬರೆಯುವ ಕಲೆ ಭಾರತದಲ್ಲಿ ಆರಂಭವಾದರೂ ಸಹ ಮೂರ್ತಿ ಶಿಲ್ಪಕಲೆಯ ಕ್ರಿ.ಪೂ. ೨೦೦೦ಕ್ಕೆ ಮುನ್ನಾ ಅನೇಕ ಸುಂದರವಾದ ಮೂರ್ತಿಗಳು ಸಿಕ್ಕಿವೆ. ಸಿಂಧೂ ನಾಗರಿಕತೆಯಲ್ಲಿ ಲಿಂಗ, ಪಾಣಿವಟ್ಟ, ವೃಷಭ, ಮತ್ತು ಇತರ ಅನೇಕ ವಿಗ್ರಹಗಳು ಕಂಡು ಬರುತ್ತವೆ.

ಮೌರ್ಯರ ನಂತರ ಉತ್ತರ ಭಾರತದಲ್ಲಿ ಶಕ, ಕುಶಾನ, ಸಂಗಮ, ಕಣ್ವ, ಗುಪ್ತರು, ವರ್ಧನರು, ಮುಂತಾದ ಅರಸು ಮನೆತನಗಳು ಆಳಿದರೆ ದಕ್ಷಿಣ ಭಾರತದಲ್ಲಿ ಅದರಲ್ಲೂ ಕನ್ನಡ ನಾಡಿನಲ್ಲಿ ಶಾತವಾಹನರು, ಕದಂಬರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಕಲ್ಯಾಣಿ ಚಾಲುಕ್ಯರು ವಿಜಯನಗರ ಅರಸರು ಹೀಗೆ ಮೊದಲ್ಗಾದವರ ಆಳಿ ತಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಚಿತ್ರಕಲೆಗೆ ಇತ್ತ ಪೋಷಣೆ ಸ್ಮರಣಾರ್ಹವಾಗಿವೆ.

ಬಾಗಲಕೋಟೆ ಜಿಲ್ಲೆಯಲ್ಲಿ ಆಳಿದ ರಾಜ ಮನೆತನಗಳು ಶಾತವಾಹನರು, ಬದಾಮಿ ಚಾಲುಕ್ಯರು, ಬನವಾಸಿ ಕದಂಬರು, ಮಳಖೇಡದ ರಾಷ್ಟ್ರಕೂಟರು. ಕಲ್ಯಾಣದ ಚಾಲುಕ್ಯರು, ಹಳೇಬಿಡಿನ ಹೊಯ್ಸಳರು, ದೇವಗಿರಿ ಯಾದವರು, ಈ ಪ್ರದೇಶಗಳ ಮೇಲೆ ಹಿಡಿತಸಾಧಿಸಿ ಅವುಗಳ ಸಾಂಸ್ಕೃತಿಕ ವಾಸ್ತುಶಿಲ್ಪದ ಪ್ರಗತಿಗೆ ಕಾರಣ ಭೂತರಾಗಿದ್ದಾರೆ. 'ಸಿಂಧವಾಡಿ' ಎಂದು ಕರೆಯಲ್ಪಡುವ ವಿಶಾಲವಾದ ಪ್ರಾಂತ್ಯವನ್ನು ಬಾಗಡಗೆಯುಸಿಂದರು ಈ ಪ್ರದೇಶದಿಂದಲೆ ಆಳಿದರೆಂಬುದು ಗಮನೀಯವಾಗಿದೆ. ಸಹಜವಾಗಿ ಈ ಪ್ರದೇಶದ ಪ್ರಾಚೀನ ಶಿಲ್ಪ ಶಾಸನ ಮುಂತಾದ ಪರಾತತ್ವ ಅವಶೇಷಗಳು ಬಹುವಾಗಿ ದೊರಕುತ್ತೇವೆ.

**ಉದ್ದೇಶ :**

ಶಿಲ್ಪಕಲೆಯ ಅಧ್ಯಯನ ಈ ಕೃತಿಯ ಮೂಲ ಉದ್ದೇಶವಾಗಿದೆ. ಅದಕ್ಕೆ ಪೂರಕವಾಗಿರುವ ಹಲವು ವಿಷಯಗಳನು ಅಭ್ಯಸಿದೆ. ಹುನಗುಂದ ಪ್ರದೇಶದ ಶಿಲ್ಪಗಳು ಒಂದು ಅಧ್ಯಯನದ ಸಮೀಕ್ಷೆಯನ್ನು ಮಾಡಲು ಉದ್ದೇಶಿಸಲಾಗಿದೆ. ಈ ಪ್ರದೇಶದಲ್ಲಿನ ದೇವಾಲಯಗಳು, ಸ್ಮಾರಕಗಳು ಶಾಸನಗಳು, ನಾಣ್ಯಗಳು, ಸಾಹಿತ್ಯಗಳು ಹಿನ್ನಲೆಯನ್ನು ಅಧ್ಯಯನ ಮಾಡಿ ಗ್ರಾಮಗಳ ಕ್ಷೇತ್ರಕಾರ್ಯಗಳ ಮೂಲಕ ಹುನಗುಂದ ಪ್ರದೇಶದ ಜೈನ, ಬೌದ್ಧ, ಶೈವ, ವೈಷ್ಣವ ಧರ್ಮದ ಆಧಾರದ ಮೇಲೆ ಸ್ಥಾಪಿತಗೊಂಡ ಪ್ರತಿಮೆಗಳ ಸೂಕ್ಷ್ಮ ಅಧ್ಯಯನ ಮಾಡಲು ಹುನಗುಂದ ಪ್ರದೇಶದ ಸುಮಾರು ೧೫ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿ ರಾಜ್ಯಭಾರ ಮಾಡಿದ ಐತಿಹಾಸಿಕ ರಾಜ್ಯ ಮನೆತನಗಳ ಕುರುಹುಗಳ ಆಧಾರ ಮೇಲೆ ಮೂರ್ತಿ ಶಿಲ್ಪ ಅಧ್ಯಯನದ ವಿವಿಧ ಪ್ರತಿಮಾ ಲಕ್ಷಣಗಳ ಆಧಾರದ ಮೇಲೆ ಮುಖ್ಯವಾಗಿ ರಾಜರು, ರಾಣಿಯರು, ಮಾಂಡಲೀಕರು, ದಂಡಾಧಿಕಾರಿಗಳು, ಸೇವಕಿಯರ, ಸ್ಥಾಪಸಿದ ದೇವಾಲಯಗಳಲ್ಲಿ ಅನೇಕ ವಿವಿಧ ಧರ್ಮಕ್ಕೆ ಸಂಬಂಧಿಸಿದ ಮೂರ್ತಿ ಶಿಲ್ಪಗಳ ಅಧಯ್ಯನಕ್ಕೆ ಪೂರಕವಾದ ದಾಖಲೆಗಳ ಆಧಾರದ ಮೇಲೆ ಈ ಪ್ರಬಂಧವನ್ನು ಹಾಗೂ ಈ ಮೂರ್ತಿಶಿಲ್ಪದ ಮೌಲ್ಯವನ್ನು ಅಧಿಕಗೊಳಿಸುವ ಈ ಉದ್ದೇಶ ಹೊಂದಿದ್ದೇನೆ.

ಭಾರತೀಯ ಚಾರಿತ್ರಿಕ ಹಿನ್ನಲೆಯನ್ನು ಗಮನಿಸಿದಾಗ ಕರ್ನಾಟಕ ತನ್ನದೆಯಾದ ಪರಂಪರೆಯನ್ನು ಉಳಿಸಿ-ಬೆಳಸಿಕೊಂಡು ಬಂದಿದೆ."ಕರ್ನಾಟಕ ಎರಡು ಸಾವಿರ ವರ್ಷಗಳ ಸುದೀರ್ಘ ಉನ್ನತ ಪರಂಪರೆಯನ್ನು ಹೊಂದಿದೆ"ವಿಸ್ತೃತ ಈ ಭೂಭಾಗದಲ್ಲಿ ಅನೇಕ ರಾಜ್ಯಮನೆತನಗಳ ರಾಜ್ಯಮಾಡಿವೆ. ಅವರ ಆಡಳಿತದಲ್ಲಿ ಮಾಡಿದ ಅನೇಕ ಸಾಧನಗಳ ಜೊತೆಗೆ ಸಾಂಸ್ಕೃತಿಕವಾಗಿ ಈ ಪ್ರದೇಶಕ್ಕೆ ಆಳರಸರ ಕೊಡುಗೆ ಎನು ಎಂಬುದನ್ನು ತಿಳಿಯಲು ಅವರ ಅವಧಿ ಹೊರಡಿಸಿದ ಅನೇಕ ಪ್ರಾಚ್ಯಶಾಸ್ತ್ರ ಹಾಗೂ ಸಾಹಿತ್ಯಿಕ ಆಧಾರದ ಮೇಲೆ ಹುನಗುಂದ ಪ್ರದೇಶ ಮೂರ್ತಿಶಿಲ್ಪವನ್ನು ಅಧ್ಯಯನ ಮಾಡಲು ಹಲವಾರು ಗ್ರಂಥಗಳ ಸಹಾಯದಿಂದ ಈ ಉದ್ದೇಶಿತ ವಿಷಯವನ್ನು ಅವಲೋಕಿಸಿ ಸಾಕಾರಗೊಳಿಸಲು ಪ್ರಯತ್ನಿಸಲಾಗಿದೆ.

ಒಂದು ಕ್ಷೇತ್ರ ದೊಡ್ಡ ಪ್ರಮಾಣದಲ್ಲಿರಲಿ ಚಿಕ್ಕ ಪ್ರಮಾಣದಲ್ಲಿರಲಿ ಅದರಲ್ಲಿ ವಿಕಾಸಗೊಂಡ ಕಲೆಯನ್ನು ಅಧ್ಯಯನ ಮಾಡಿ ಅದರ ಬಗ್ಗೆ ಮಾಹಿತಿ ಸಂಗ್ರಹಿಸುವುದು ಅಗತ್ಯ ನಾವು ಮಾಡಿದ ಕ್ಷೇತ್ರಕಾರ್ಯದ ವರದಿಯನ್ನು ಆಧರಿಸಿ ಅಲ್ಲದೆ ವಾಸ್ತುಶಿಲ್ಪ ಕಲೆ ಮತ್ತು ಮೂರ್ತಿಶಿಲ್ಪ ಬೆಳವಣಿಗೆ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಅರಿಯುವ ಈ ಪ್ರಯತ್ನವನ್ನು ತಯಾರಿಸುವ ಉದ್ದೇಶವಾಗಿದೆ.

ಕಲಾಜ್ಞಾನವನ್ನು ಬಳಸಿಕೊಂಡು ಈ ನಿರ್ಧಿಷ್ಟ ಪ್ರದೇಶದ ಮೂರ್ತಿ ಶಿಲ್ಪಕಲೆಯನ್ನು ಕುರಿತು ಈ ಪ್ರಬಂಧವನ್ನು ರಚನೆ ಮಾಡಿ ಕಲಾ ಇತಿಹಾಸವನ್ನು ಈ ಹುನಗುಂದ ಪ್ರದೇಶದ ಮೂರ್ತಿ ಶಿಲ್ಪಕಲೆ ಈ ಪ್ರಬಂಧ ಕಾಣಿಕೆಯಾಗಿ ನೀಡಲು ಪ್ರಯತ್ನಸಲಾಗಿದೆ..... ಹುನಗುಂದ ಪ್ರದೇಶದ ಮೂರ್ತಿಶಿಲ್ಪ ಇತಿಹಾಸ ಸಮೀಕ್ಷೆಯನ್ನು ಮಾರ್ಗದರ್ಶಕರ ಉಪಯುಕ್ತ ನುಡಿಯೊಂದಿಗೆ ಸಾಧ್ಯವಾದಷ್ಟು ಮಟ್ಟಿಗೆ ಆಕಾರಗಳ ಆಧಾರದಿಂದ ಈ ಪ್ರಬಂಧವನ್ನು ವಿವರಣಾತ್ಮಾಕವಾಗಿ ಬೆಳೆಸಲು ಪಯತ್ನಿಸಲಾಗಿದೆ.

**ವ್ಯಾಪ್ತಿ :**

ಮೂರ್ತಿಶಿಲ್ಪವು ಅತ್ಯಂತ ಪ್ರಾಚೀನವಾದ ಕಲೆ. ಈ ಕಲೆಗೂ ವಿಗ್ರಹಾರಧನೆಗೂ ನಿಕಟವಾದ ಸಂಬಂಧವಿದ್ದರಿಂದ ಪ್ರಾಚೀನ ಭಾರತೀಯರು ಇತರೆ ಜನಾಂಗದವರೂ ಮೂರ್ತಿಶಿಲ್ಪದಲ್ಲಿ ತೊಡಗಿದರು. ಭಾರತದ ಮೂರ್ತಿಶಿಲ್ಪವು ಭಾರತ ಸಂಸ್ಕೃತಿಯ ಜಯಸ್ತಂಭ ಮೊಹೆಂಜೋದಾರೋವಿನಲ್ಲಿ ನೆಟ್ಟ ಬೀಜವು, ಗಾಂಧಾರ ಪದ್ಧತಿಯ ಜಲದಿಂದ ಅಂಕುರಿಸಿ ಮೌರ್ಯರ ಕಾಲದಲ್ಲಿ ವೃಕ್ಷವಾಗಿ, ಗುಪ್ತರಕಾಲದಲ್ಲಿ ಪುಷ್ಪದಿಂದ ಸೊಗಸಿತು.

ವಿಷಯ ಸರಳ, ಭಾವಯುಕ್ತ ಪ್ರತಿಮೆಗಳು ಮನೋಮೋಹಕವಾಗಿವೆ. ಮೂರ್ತಿ ಶಿಲ್ಪವು ಶಿಲ್ಪ ಸಾಮಾನ್ಯದ ಆತ್ಮವೆಂಬುದು "ವಿಷ್ಣು ಧರ್ಮೋತ್ತರ ಪುರಾಣದ" ಶ್ಲೋಕಗಳಿಂದ ಸಾಧ್ಯವಾಗುತ್ತದೆ.[೨]

ಇಂತಹ ಇತಿಹಾಸ ಪೂರ್ವ ಹಿನ್ನಲೆಯನ್ನು ಹೊಂದಿದ ಮೂರ್ತಿಶಿಲ್ಪವು ಕರ್ನಾಟ ಸಂಸ್ಕೃತಿಯ ಹಿರಿಮೆಯನ್ನು ಶ್ರೀಮಂತಗೊಳಿಸಿದೆ ಒಂದು ವಿಷಯದ ವ್ಯಾಪ್ತಿ ಎಂದರೆ ಆ ಕ್ಷೇತ್ರದ ವಿಸ್ತಾರ ಅಥವಾ ಅದು ಹೊಂದಿದ ಗಡಿರೇಖೆ ಎಂದರ್ಥ.[೩] ರಾಜಕೀಯ ವಸ್ತುನಿಷ್ಠತೆಯನ್ನು ಮಾತ್ರ ಪರಿಗಣಿಸುತ್ತಿದ್ದ ಇತಿಹಾಸ ಇತ್ತೀಚಿನ ದಿನಗಳಲ್ಲಿ ವಿಜ್ಞಾನದ ಪ್ರಗತಿಯಿಂದಾಗಿ ಹಾಗೂ ವೈಜ್ಞಾನಿಕ ವಿಕಾಸದಿಂದ ಭೂ ಉತ್ಪನ್ನ ಅನ್ವೇಷಣೆ ವೈಜ್ಞಾನಿ ಪರಿಷ್ಕರಣೆ ಮುಂತಾದ ಪ್ರಯೋಗಾತ್ಮಕ ಸಂಶೋಧನೆಯಿಂದ ಚರಿತ್ರೆ ತನ್ನ ಮೌಲ್ಯವನ್ನು ಹೆಚ್ಚಿಸಿಕೊಂಡಿತು. ಆದ್ದರಿಂದ ಈ ಮೂರ್ತಿಶಿಲ್ಪದ ಉಗಮ ಮತ್ತು ವಿಕಾಸವನ್ನು ನೋಡಿದಾಗ ಕ್ರಿ.ಶ.ಕ್ರಿ.ಪೂ ೩ನೇ ಶತಮಾನದಿಂದ ೧೨ನೇ ಶತಮಾನದವರೆಗೂ ಅನೇಕ ರಾಜಮನೆತನಗಳ ಹುನಗುಂದ ಪ್ರದೇಶದಲ್ಲಿ ರಾಜ್ಯಭಾರ ಮಾಡಿದರು. ಅವರಲ್ಲರೂ ಪರಧರ್ಮ ಸಾಹಿಷ್ಣಾತಾವಾದಿಗಳಾಗಿದ್ದರು ಬದಾಮಿ ಚಾಲುಕ್ಯರ, ಕಲ್ಯಾಣಿ ಚಾಲುಕ್ಯರು, ರಾಷ್ಟ್ರಕೂಟರು, ಕಲಚೂರಿಗಳು, ಹೊಯ್ಸಳರು, ವಿಜಯನಗರ ಅರಸರು, ಮರಾಠರು ರಾಜ್ಯಭಾರ ಮಾಡಿದರು. ಇವರ ಅವಧಿಯಲ್ಲಿ ಸಾಕಷ್ಟು ದೇವಾಲಯಗಳನ್ನು ನಿರ್ಮಿಸಿದರು. ಜೊತೆಗೆ ಮೂರ್ತಿಶಿಲ್ಪಗಳನ್ನು ಕಂಡರಿಸಿದರು.

ಇಂತಹ ಪ್ರಾಚೀನ ಕಾಲದ ರಾಜ್ಯಮನೆತನಗಳು ಇಲ್ಲಿ ಆಡಳಿತ ಮಾಡಿದ್ದರಿಂದ ಸಾಂಸ್ಕೃತಿಕ ಪ್ರಗತಿ ಹೊಂದಲು ಕಾರಣವಾಯಿತು. ಧರ್ಮ ಸಾಹಿತ್ಯ, ಶಿಕ್ಷಣ ಜೊತೆಗೆ ಕಲೆ ಹಾಗೂ ವಾಸ್ತುಶಿಲ್ಪ ಪ್ರಗತಿಗೆ ಕಾರಣರಾದರು. ಅನೇಕ ಶಾಸನಗಳ ಸಾಹಿತ್ಯಗಳು ಮೂರ್ತಿಶಿಲ್ಪದ ಬಗ್ಗೆ ವಿವರಣೆ ನೀಡುತ್ತೇವೆ. ರಾಜರು, ರಾಣಿಯರು, ಮಹಾಮಂಡಳೇಶ್ವರ, ಮಹಾಸಮಂತ, ಗಾವುಂಡ, ಸೇನಾಪತಿ ಮುಂತಾದ ಅಧಿಕಾರಿಗಳು ಸ್ಮಾರಕಗಳನ್ನು ನಿರ್ಮಿಸಿದರು. ನಿಷ್ಠೆ ಹಾಗೂ ದಕ್ಷತೆಯ ಜೊತೆಗೆ ಪರೋಪಕಾರ ಭೂದಾನ, ದಾನದತ್ತಿಗಳನ್ನು ಕೊಟ್ಟದ್ದರಿಂದ ಇವರ ಸ್ಮಾರಕಗಳನ್ನು ನಿರ್ಮಿಸಲು ಪ್ರಾರಂಭಿಸಿದರು.

ಧಾರ್ಮಿಕ ಪರಂಪರೆಯಲ್ಲಿ ನಂಬಿಗೆ ಇಟ್ಟು, ರಾಜರು ಪರಧರ್ಮಗಳ ಬಗ್ಗೆ ಆದರ್ಶ ಭಾವನಿಟ್ಟುಕೊಂಡು ಬಸದಿ, ಮಸದಿ, ಹಾಗೂ ವೀರಗಲ್ಲು, ಮಹಾಸತಿಗಲ್ಲುಗಳನ್ನು ನಿರ್ಮಿಸಿದರು. ಇದರಿಂದಾಗಿ ಈ ಹುನಗುಂದ ಪ್ರದೇಶದಲ್ಲಿ, ಜೈನಮೂರ್ತಿಗಳು, ವಿಷ್ಣು, ಶಿವ ಶಾಕ್ತಮೂರ್ತಿಗಳು, ಐಹೊಳೆ, ಅರಿಸಿಬೀದಿ, ಚಿತ್ರವಾಡಗಿ, ಹುನಗುಂದ, ಇಲಾಳ, ಕಂದಗಲ್, ತಾರಿವಾಳ, ಕರಡಿ, ಸೂಳೇಭಾವಿ, ಕೂಡಲಸಂಗಮ ಮುಂತಾದ ಸ್ಥಳಗಳಲ್ಲಿ ಮೂರ್ತಿಶಿಲ್ಪಗಳು ಲಭ್ಯವಾಗಿವೆ. ಇವುಗಳನ್ನು ಪ್ರತಿಮಾ ಲಕ್ಷಣಗಳ ಆಧಾರ ಮೇಲೆ ಇವು ಯಾರ ಅವಧಿಯಲ್ಲಿ ಕಂಡರಿಸಿಲಾಯಿತು ಎಂಬುದನ್ನು ಆಧಾರಗಳ ಮೂಲಕ ತಿಳಿಸಬಹುಸು.

**ಆಕರಗಳು :**

'ಒಂದು ನಾಡಿನ ಚರಿತ್ರೆಯನ್ನು ಅರಿತುಕೊಳ್ಳಲು ಹಲವಾರು ಸಾಧನಸಾಮಗ್ರಿಗಳು ಮೊರೆ ಹೋಗಬೇಕಾದದು ಅನಿವಾರ್ಯ ಇತಿಹಾಸ ರಚನೆಗೆ ಸಂಬಂಧಪಟ್ಟ ಮಾಹಿತಿಗಳನ್ನು ಪ್ರಾಚ್ಯವಸ್ತು ಮತ್ತು ಸಾಹಿತ್ಯ ವಿಭಾಗಗಳಲ್ಲಿ ಸೇರಿಸಬಹುದು. ಪ್ರಾಚ್ಯವಸ್ತುಗಳಲ್ಲಿ ಶಾಸನ, ನಾಣ್ಯ, ಸ್ಮಾರಕಗಳು, ಸೇರ್ಪಡೆಯಾಗುತ್ತವೆ. ಸಾಹಿತ್ಯ ದೇಶ-ವಿದೇಶಿಯರ ಬರವಣಿಗೆಯಿಂದ ಒಳಗೊಂಡಿರುತ್ತವೆ. ಪ್ರಸ್ತುತ ಅಧ್ಯಯನ ಈ ಎಲ್ಲದರ ನೆರವು ಪಡೆದಿದೆಯಾದರೂ ಮುಖ್ಯವಾದ ಸಾಧನ ಸಾಮಗ್ರಿ ಶಾಸನಗಳೆಂದೇ ಹೇಳಬಹುದು[೪]

ಶಾಸನಗಳೇ ಚರಿತ್ರೆ ಪುನರ್‌ರಚನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಆದರೆ ನನ್ನ ಅಧ್ಯಯನಕ್ಕೆ ದೇವಾಲಯಗಳೇ ಪ್ರಮುಖ ಆಧಾರಗಳಾಗಿವೆ.

**ದೇವಾಲಯಗಳು :**

ನಮ್ಮ ಅಧ್ಯಯನಕ್ಕೆ ಮೂರ್ತಿಶಿಲ್ಪವು ಆಧಾರ ಸ್ತಂಭವಾದದು. ವಾಸ್ತು ಹಾಗೂ ಶಿಲ್ಪ ಇವರೆಡು ಒಂದೇ ನಾಣ್ಯದ ಎರಡು ಮುಖಗಳು ಇದ್ದಂತೆ. ಆದ್ದರಿಂದ ದೇವಾಲಯಗಳ ಜೊತೆಗೆ ಮೂರ್ತಿಶಿಲ್ಪದ ಕಲಾ ಪ್ರಿಯತೆಯನ್ನು ರಾಜರು ಪೋಷಿಸಿ ಬೆಳೆಸಿದರು.

ಭಾರತೀಯರಲ್ಲಿ ವಾಸ್ತುಶಿಲ್ಪದ ಅರಿವು ಇತ್ತೆಂದು ಎಂಬುದಕ್ಕೆ ೧೮೩೪ ರಲ್ಲಿ ರಾಮರಾಜ್ "ಮಾನಸಾರ" ಹಸ್ತ ಪ್ರತಿ ಸಂಪಾದಿಸಿ ಪ್ರಕಟಿಸಿದರು. ಅದು ವಾಸ್ತು ಶಿಲ್ಪಕ್ಕೆ ಸೇರಿದ ಅನೇಕ ಮಾಹಿತಿ ಹೊರಹಾಕಿತು. ಇದರ ಜೊತೆಗೆ ಮಯಮತ, ಮಾನಸೊಲ್ಲಾಸ್, ಅಭಿಲಾಷ,ಚಿಂತಾಮಣಿ, ವಿಷ್ಣು ಧರ್ಮೋತ್ತರ ಗ್ರಂಥಗಳು ಹಾಗೂ ಪುರಾಣಗಳು, ಆಗಮಗಳ ವಿಪುಲವಾಗಿ ವಾಸ್ತುಶಿಲ್ಪದ ಬಗ್ಗೆ ತಿಳಿಸುತ್ತವೆ. ಇವುಗಳ ಜೊತೆಗೆ ಮೂರ್ತಿಗಳ ಬಗ್ಗೆ ಋಗ್ವೇದ, ಶುಕ್ಲಯಜುರ್ವೇದ, ಕಾಠಕಸಂಹಿತೆ, ಸಾಮವೇದ, ಅಥರ್ವವೇದ, ಧರ್ಮಶಾಸ್ತ್ರ ಪಾಣಿನಿಯ ಅಷ್ಟಾಧ್ಯಾಯ, ಮೂರ್ತಿಗಳ ಬಗ್ಗೆ ಪ್ರಾಚೀನತೆ ಬಗ್ಗೆ ವಿವರಿಸುತ್ತವೆ.[5]

ಕರ್ನಾಟಕ ವಾಸ್ತುಶಿಲ್ಪ ಬಗ್ಗೆ ತಿಳಿಯುದಾದರೆ ಕದಂಬರ-ಪ್ರಣವೇಶ್ವರ ದೇವಾಲಯ ಅತ್ಯಂತ ಪುರಾತನವಾದದು. ಕ್ರಿ.ಶ ೪೫೦ ಕ್ಕಿಂತ ಹಿಂದೆಯೇ ನಿರ್ಮಾಣ, ಚಾಲುಕ್ಯರ ದುರ್ಗಾದೇವಾಲಯ, ೫ನೇ ಶತಮಾನದ ಹಲಸಿಯ ಜೈನಬಸದಿ, ೬ನೇ ಶತಮಾನದ ಚಾಲುಕ್ಯರ ಸಪ್ತ ಮಾತೃಕೆಯರ, ಕಾರ್ತಿಕೇಯ, ವಿಷ್ಣುಮೂರ್ತಿ, ವರಹಮೂರ್ತಿ, ಜೈನಮೂರ್ತಿ, ಶಿವಮೂರ್ತಿಗಳು, ಅತ್ಯಂತ ಪ್ರಾಚೀನ ಮೂರ್ತಿಗಳಾಗಿರುವ ಚಾಲುಕ್ಯರ ವಾಸ್ತುಶಿಲ್ಪದ ತವರು ಮನೆಯೆಂದು ಪ್ರಸಿದ್ಧ ಪಡೆದ ಐಹೊಳೆ ಕ್ರಿ.ಶ. ೪೫೦-೬೫೦ ರಲ್ಲಿ ಸುಮಾರು ೭೦ ದೇವಾಲಯಗಳು ನಿರ್ಮಾಣವಾದವು. ಪಟ್ಟದಕಲ್ಲಿನ ಕಾಶಿನಾಥ, ಪಾಪನಾಥ ದೇವಾಲಯ, ಉತ್ತರಭಾರತದ ಶೈಲಿಯಲ್ಲಿ ನಿರ್ಮಾಣವಾಗಿವೆ. ಈ ದೇವಾಲಯ ನಿರ್ಮಾಣದ ಜೊತೆಗೆ ಈ ಪ್ರದೇಶದಲ್ಲಿ ಜೈನಮೂರ್ತಿಗಳು, ಶೈವಮೂರ್ತಿಗಳು, ವೈಷ್ಣವ ಮೂರ್ತಿಗಳು, ಗಣಪತ್ಯ ಮೂರ್ತಿಗಳು, ವೀರಗಲ್ಲು, ಮಹಾಸತಿಗಲ್ಲು, ನಿಷಿದಿಗಲ್ಲು, ನಾಗಮೂರ್ತಿಗಳು, ಬಿಡಿಶಿಲ್ಪಗಳು, ನನ್ನ ಅಧ್ಯಯನಕ್ಕೆ ಆಕಾರಗಳಾಗಿವೆ.[೬]

ಕರ್ನಾಟಕದ ವಾಸ್ತುಶಿಲ್ಪ ಹಾಗೂ ಮೂರ್ತಿ ಶಿಲ್ಪದ ಆಧ್ಯಯನಕ್ಕೆ ಹುನಗುಂದ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಕೊಂಡು ಪ್ರಮುಖ ದೇವಾಲಯ ಹಾಗೂ ಮೂರ್ತಿಶಿಲ್ಪ ಪರಿವೀಕ್ಷಣೆಯನ್ನು ಮಾಡಲಾಯಿತು. ಇದರ ಜೊತೆಗೆ ಈ ಪ್ರದೇಶಕ್ಕೆ ಸಂಬಂಧಿಸಿದ ಸಾಹಿತ್ಯಿಕ ಆಧಾರಗಳಾದ ಡಾ|| ಎಸ್. ರಾಜಶೇಖರರ ಕರ್ನಾಟಕ ಕಲೆ ಹಾಗೂ ವಾಸ್ತುಶಿಲ್ಪ ಎಂಬ ಕೃತಿ ಡಾ|| ಅರುಣಿಯವರ ದಖನ್ ಪೇಂಟಿಗ್ಸ್ ಆರ್ಕಿಯೋಲಾಜಿಕಲ್ ಸರ್ವೇಯ ಭೂಪಟಗಳು ಡಾ|| ಈರಣ್ಣಾ ಪತ್ತಾರವರ -ಬದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ, ಶೀಲಾಕಾಂತ ಪತ್ತಾರವರ-ಚಾಲುಕ್ಯರ ಕಲೆ ಹಾಗೂ ವಾಸ್ತುಶಿಲ್ಪ ಪರ್ಶಿ ಬ್ರೌನ ಪ್ರವಾಸ ಕಥನ, ಬಾಗಲಕೋಟೆ ಜಿಲ್ಲೆಯ ಗ್ಯಾಸೆಟಿಯರ, ಡಾ|| ಕಸೆನ್ಸರವರು - ಚಾಲುಕ್ಯ ವಾಸ್ತುಶಿಲ್ಪ ಡಾ|| ಶ್ರೀನಿವಾಸ ಪಾಡಿಗಾರರವರ "|ಸೂರ್ಯ ಮತ್ತು ಬ್ರಹ"|- ಇತಿಹಾಸದ ಶಾಸನ ಕೃತಿಗಳನ್ನು ಆಧಾರವಾಗಿಟ್ಟುಕೊಂಡಿದ್ದೇನೆ.[೭]

**ಶಾಸನಗಳು :**

ಶಾಸನಗಳು ಚರಿತ್ರೆಯ ಪುನರ್‌ರಚನೆಯಲ್ಲಿ ವಹಿಸಿದ ಪಾತ್ರ ತುಂಬ ಮಹತ್ವದ್ದು. ನಮ್ಮ ದೇಶದ ಅನೇಕ ಶತಮಾನಗಳ ಇತಿಹಾಸ ಸ್ವರೂಪಕ್ಕೆ ಶಾಸನ ಸಾಮುಗ್ರಿಯೇ ಜೀವನಾಡಿ. ಅವು ಪ್ರಾಚೀನ ಬದುಕಿನ ಸಮಸ್ತ ಸಂವೇದನಗಳ ಪ್ರಮಾಣಿಕ ಧ್ವನಿಗಳಾದುದರಿಂದ ನಮ್ಮ ನಾಡಿನ ಜನಜೀವನವು ಶಾಸನಗಳಲ್ಲಿ ಅಭಿವ್ಯಕ್ತಿಗೊಂಡಿರುವಂತೆ ಪ್ರಾಯಾಶಃ ಇನ್ನೆಲ್ಲೂ ವ್ಯಕ್ತವಾಗಿಲ್ಲ ಅಂತೇಯೇ ಹುನಗುಂದ ಪ್ರದೇಶದ ಐತಿಹಾಸಿಕ ಸಂಶೋಧನಾ ಪ್ರಬಂಧಕ್ಕೆ ಪ್ರತಿ ಹಂತದಲ್ಲೂ ಅಧಿಕೃತ ಭೂಮಿಕೆಯಾಗಿದೆ.[೮]

ಹುನಗುಂದ ಪ್ರದೇಶದ ಇತಿಹಾಸವನ್ನು ಅರಿಯಲು ಶಾಸನಗಳ ಬಹಳ ಪ್ರಮುಖ ಪಾತ್ರ ವಹಿಸುತ್ತವೆ. ಕ್ರಿ.ಶ. ಆರನೇಯ ಶತಮಾನದಿಂದ ೧೦ನೇ ಶತಮಾನಕ್ಕೆ ಸೇರಿದ ಕನ್ನಡ, ಸಂಸ್ಕೃತಿ, ಮರಾಠಿ,...... ೧೨೦೦ ಕ್ಕೂ ಹೆಚ್ಚು ಶಾಸನಗಳ ಜಿಲ್ಲೆಯಲ್ಲಿ ಲಭ್ಯವಾಗಿವೆ. ಅವುಗಳಲ್ಲಿ ಹತ್ತಾರು ತಾಮ್ರ ಶಾಸನಗಳು ಬಿಟ್ಟರೆ ಉಳಿದೆಲ್ಲಾ ಶಿಲಾಶಾಸನಗಳಾಗಿವೆ. ಈ ಅವಧಿಯಲ್ಲಿ ಜಿಲ್ಲೆಯ ಮೇಲೆ ನಿಯಂತ್ರಣವೇರಿದ್ದ ಬದಾಮಿ ಚಾಲ್ಕ್ಯುರು, ಕಲ್ಯಾಣಿ ಚಾಲ್ಯುಕರು. ಕಳಲಚೂರಿಗಳು, ರಾಷ್ಟ್ರಕೂಟರು, ಸೇಉಣ, ವಿಜಯನಗರ ಹಾಗೂ ಬಹುಮನಿ ಸುಲ್ತಾನರು, ಆದಿಲ್‌ಷಾಹಿಗಳು, ಬ್ರಿಟೀಷ್ ಆಡಳಿತಕ್ಕೆ ಸಂಬಂಧಿಸಿದಂತೆ ಅನೇಕ ಅಳರಸರ ಮಾಂಡಲೀಕರು, ದಂಡನಾಯಕರು, ಸ್ಥಳಿಯ ಅಧಿಕರಿಗಳು ಮುಂತಾದವರು ನೀಡಿರುವ ಈ ಶಾಸನಗಳಲ್ಲಿ ದತ್ತಿಶಾಸನಗಳಾಗಿವೆ. ಜಿಲ್ಲೆಯಲ್ಲಿ ವರದಿಯಾಗಿರುವ ಶಾಸನಗಳಲ್ಲಿ ಶೇ. ೮೦ ರಾಷ್ಟ್ರ ಸೌತ ಇಂಡಿಯನ್ ಇನ್‌ಸ್ಕ್ರಿಪಷನ್ಸ್ ಸಂಪುಟ ೧೧, ೧೫, ೧೮, ೨೦, ಅವುಗಳನ್ನು ಆಧರಿಸಿ ಬಿಜಾಪೂರ ಜಿಲ್ಲಾ ಶಾಸನಗಳು ರಚಿತವಾಗಿದೆ. ಇದರಿಂದ ಹುನಗುಂದ ಪ್ರದೇಶ ಚರಿತ್ರೆಯನ್ನು ಅರಿಯಬಹುದು.[5]

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನಾ ಸಂಸ್ಥೆ ಹೊರತಂದ ಕರ್ನಾಟಕ ಶಾಸನಗಳ ಸಂಪುಟ, ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾಲಯದವರ ಪ್ರಕಟಿಸಿದ ಬಾಗಲಕೋಟ ಜಿಲ್ಲಾ ಶಾಸನಸಂಪುಟ ಈವರೆಗೆ ಹುನಗುಂದ ಪ್ರದೇಶದಲ್ಲಿ ಪ್ರಕಟವಾದ ಶಾಸನಗಳ ಭೂದಾನ, ಆಡಳಿತ, ಕಂದಾಯ, ದೇವಾಲಯ ದತ್ತಿ ಬಗ್ಗೆ ಸಂಬಂಧಿಸಿದವುಗಳಾಗಿವೆ. ಹೀಗೆ ಇವೆಲ್ಲವೂ ಸಹಾಯದಿಂದ ಹುನಗುಂದ ಪ್ರದೇಶದ ಮೂರ್ತಿ ಶಿಲ್ಪವನ್ನು ತಿಳಿಯಬಹುದು.

**ಇತರೆ ಆಕರಗಳು :**

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ತಾಲೂಕಿನ ಚರಿತ್ರೆ ತಿಳಿಸುವ ಡಾ|| ಶಂಭಬಳಗಾರರವರ ಹುನಗುಂದ ತಾಲೂಕಿನ ದರ್ಶನ ಡಾ|| ಎಂ.ಎಂ. ಕಲಬುರ್ಗಿಯವರು 'ಬಿಜಾಪೂರ ಜಿಲ್ಲಾ ಶಾಸನ ಸೂಚಿ '| ಡಾ|| ಶ್ರೀನಿವಾಸ ಪಾಡಿಗಾರ, ಡಾ|| ಎಸ್. ರಾಜಶೇಖರ '|ಎಸ್ಟಡಿ ಆಫ್ ಐಹೊಳೆ ಟೆಂಪಲ್ಸ್ '| ಹಾಗೂ ಇತಿಹಾಸ ಸಂಶೋಧಕರ ಬಿಡಿ ಲೇಖನಗಳು ಹುನಗುಂದ ಪ್ರದೇಶದ ಮೂರ್ತಿ ಶಿಲ್ಪಗಳ ಬಗ್ಗೆ ಬೆಳಕು ಚೆಲ್ಲುತ್ತವೆ.

**ಅಧ್ಯಯನದ ವೈಧಾನಿಕತೆ :**

ಹುನಗುಂದ ಪ್ರದೇಶದ ಮೂರ್ತಿಶಿಲ್ಪ ಎಂಬ ವಿಷಯದ ಅಧ್ಯಯನಕ್ಕಾಗಿ ವಿವಿಧ ಐತಿಹಾಸಿಕ ಪ್ರಸಿದ್ಧ ಹಳ್ಳಿಗಳ ಕ್ಷೇತ್ರ ಕಾರ್ಯವನ್ನು ಮಾಡಿ ಅಲ್ಲಿ ಸ್ವತಃ ದೇವಾಲಯ ಮೂರ್ತಿ ಶಿಲ್ಪವನ್ನು ವೀಕ್ಷಿಸಿ, ಛಾಯಚಿತ್ರ ಸೆರೆಹಿಡಿದು, ಮೂರ್ತಿಶಿಲ್ಪಗಳನ್ನು ಪ್ರತಿಮಾ ಲಕ್ಷಣಗಳ ಆಧಾರದ ಮೇಲೆ ವಿಶ್ಲೇಷಿಸಿ ಈ ಪ್ರಬಂಧವನ್ನು ರಚಿಸಲಾಯಿತು.

ಈ ಅಧ್ಯಯನದ ಅನುಕೂಲಕ್ಕಾಗಿ ಮಹಾಪ್ರಬಂಧವನ್ನು ಆರು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಉದ್ದೇಶ, ವ್ಯಾಪ್ತಿ ಆಕಾರಗಳು ಮತ್ತು ವೈಧಾನಿಕತೆ ಕುರಿತು ಹೇಳಲಾಗಿದೆ. ಎರಡನೇಯ ಅಧ್ಯಾಯದಲ್ಲಿ ಹುನಗುಂದ ಪ್ರದೇಶ ಚಾರಿತ್ರಿಕ ಹಿನ್ನಲೆ ಹಾಗೂ ಭೌಗೋಳಿಕ ಲಕ್ಷಣಗಳ ಬಗ್ಗೆ ವಿವರಿಸಲಾಗಿದೆ. ಮೂರನೇಯ ಅಧ್ಯಾಯದಲ್ಲಿ ಮೂರ್ತಿ ಶಿಲ್ಪಕಲೆ ಉಗಮ ಮತ್ತು ವಿಕಾಸ ಕುರಿತು ಚರ್ಚಿಸಲಾಗಿದೆ. ನಾಲ್ಕನೇಯ ಅಧ್ಯಾಯದಲ್ಲಿ ಹುನಗುಂದ ಪ್ರದೇಶದ ಶಿಲ್ಪಗಳು ಮತ್ತು ದೇವಾಲಯಗಳ ವೈಶಿಷ್ಟ್ಯ ನಾಗರ, ದ್ರಾವಿಡ,

ವೇಸರ ಶೈಲಿ ಕುರಿತು ವಿಶ್ಲೇಷಣೆ. ಐದನೇಯ ಅಧ್ಯಾಯದಲ್ಲಿ ಹುನಗುಂದ ಪ್ರದೇಶದ ಮೂರ್ತಿಶಿಲ್ಪಗಳ ವಿಶ್ಲೇಷಣೆ ಜೈನ, ಶೈವ , ವೈಷ್ಣವ , ಶಾಕ್ತ , ನಾಗಶಿಲ್ಪ , ವೀರಗಲ್ಲು ಗಳು ಬಗ್ಗೆ ವಿಶ್ಲೇಷಿಸಿ ಚರ್ಚಿಸಲಾಗಿದೆ.

ಆರನೇಯ ಅಧ್ಯಾಯ ಸಮಾರೋಪ ಮೇಲಿನ ಐದು ಅಧ್ಯಾಯಗಳ ಸಾರಾಂಶವನ್ನು ಪುನಾರಾವಲೋಕನ ಮಾಡುವ ದರೊಂದಿಗೆ ನಮ್ಮ ಕ್ಷೇತ್ರಕಾರ್ಯದ ಪ್ರತಿಫಲವಾಗಿ ಹೋರಹೊಮ್ಮಿದ ಹೊಸ ಹೊಸ ವಿಷಯುಗಳನ್ನು ಸಂಗ್ರಹಿಸಲಾಗಿದೆ. ಜನರ ಧಾರ್ಮಿಕ ನಂಬಿಗೆಯು ಜನಪದ ಪ್ರತೀಕ ಮೂರ್ತಿ ಶಿಲ್ಪ ಉಗಮವಾಗಲು ಸಾಧ್ಯವಾಯಿತು ಎಂಬುದನ್ನು ಚರ್ಚಿಸಲಾಗಿದೆ.

**ಅಡಿ ಟಿಪ್ಪಣಿಗಳು :**

೧) ಡಾ॥ ಕೊಪ್ಪ ಎಸ್. ಕೆ. -ತರ್ದವಾಡಿನಾಡು -"ಒಂದು ಅಧ್ಯಯನ ಇಂಡಿ ೧೯೯೦ ಪು.ಸಂ. ೨

೨) ಕೃಷ್ಣರಾಯ ಆ.ನಂ.(ಸಂ)- "ಭಾರತೀಯ ಸಾಂಸ್ಕೃತಿಕ ದರ್ಶನ" ಬೆಂಗಳೂರು ೧೯೬೨ ಪು.ಸಂ.೫೧೯

೩) ಡಾ॥ ಕೊಪ್ಪ ಎಸ್. ಕೆ. -ತರ್ದವಾಡಿನಾಡು ಒಂದು ಅಧ್ಯಯನ ಇಂಡಿ ೧೯೯೦ ಪು.ಸಂ.-೩

೪) ಡಾ॥ ಕೊಪ್ಪ ಎಸ್. ಕೆ. -ತರ್ದವಾಡಿನಾಡ ಒಂದು ಅಧ್ಯಯನ- ಇಂಡಿ ೧೯೯೦ ಪು.ಸಂ.-೬

೫) ಕೃಷ್ಣರಾಯ ಆ.ನಂ.(ಸಂ)- "ಭಾರತೀಯ ಸಾಂಸ್ಕೃತಿಕ ದರ್ಶನ" ಬೆಂಗಳೂರು ೧೯೬೨ ಪು.ಸಂ.-೫೯೧

೬) ಕೃಷ್ಣರಾಯ ಆ.ನಂ.(ಸಂ)- "ಭಾರತೀಯ ಸಾಂಸ್ಕೃತಿಕ ದರ್ಶನ" ಬೆಂಗಳೂರು ೧೯೯೦ ಪು.ಸಂ.- ೫೦೨

೭) ಕೊಕಟನೂರ ಎಸ್. ಎಸ್. (ಎಂ.ಫಿಲ್ ಪ್ರಬಂಧ) "ಜಮಖಂಡಿ ತಾಲೂಕಿನ ದೇವಾಲಯ" ೨೦೦೯ ಪು.ಸಂ. -೩

೮) ಡಾ॥ ಕೊಪ್ಪ ಎಸ್. ಕೆ. -ತರ್ದವಾಡಿನಾಡು - "ಒಂದು ಅಧ್ಯಯ" ಇಂಡಿ ೧೯೯೦ ಪ.ಸಂ. ೭

೯) ಮುನಿಸ್ವಾಮಿ ಆರ್. (ಸಂ) "ವಿಜಾಪೂರ ಗ್ಯಾಸೆಟಿಯರ್" ಬೆಂಗಳೂರು ೧೯೯೦ ಪು.ಸಂ.-೪೬

## ಅಧ್ಯಾಯ - ಎರಡು

# ಹುನಗುಂದ ಪ್ರದೇಶದ ಭೌಗೋಳಿಕ ಲಕ್ಷಣಗಳು ಮತ್ತು ಚಾರಿತ್ರಿಕ ಹಿನ್ನಲೆ

ಪೀಠಿಕೆ :

ಕರ್ನಾಟಕ ಐತಿಹಾಸಿಕ ಪರಂಪರೆಯಲ್ಲಿ ಒಂದು ಪ್ರದೇಶದ ಇತಿಹಾಸ ಗ್ರಾಮ ಹಾಗೂ ಪಟ್ಟಣಗಳ ಪಾತ್ರ ಬಹಳ ಮುಖ್ಯವಾದದು. ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸಗಳು ಆ ಪ್ರದೇಶದ ಮೌಲ್ಯಕವಾಗಿವೆ. ಕಲೆ, ಸಾಹಿತ್ಯ , ಸಾಂಸ್ಕೃತಿ, ಶಿಲ್ಪ ,ಸಂಗೀತ, ಸ್ವಾತಂತ್ರ ಹೋರಾಟ ಚಳುವಳಿಗಳು - ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ತನ್ನ ಹೆಜ್ಜೆಯನ್ನು ಮೂಡಿಸಿದ ಹುನಗುಂದ ತಾಲೂಕು ಇಂದು ಬಾಗಲಕೋಟ ಜಿಲ್ಲೆಯಲ್ಲಿ ಅಂದು ವಿಜಾಪೂರ ಜಿಲ್ಲೆಯಲ್ಲಿದ್ದಾಗಲೂ ಕೀರ್ತಿಗಳಿಸಿದ ತಾಲೂಕು ರಾಜಕೀಯವಾಗಿ ಸಾಂಸ್ಕೃತಿಕವಾಗಿ ಧಾರ್ಮಿಕವಾಗಿ, ಆರ್ಥಿಕವಾಗಿ, ಮಹತ್ವದ ನೆಲೆಯಾಗಿ ಬೆಳೆದು ಬಂದ ಈ ತಾಲೂಕು ಆದಿ ಶಿಲಾಯುಗದಿಂದಲೂ ಐತಿಹಾಸಿಕ ನೆಲೆಯಾಗಿ ವಿಕಾಸ ಹೊಂದುತ್ತಾ - ಹಂತ ಹಂತವಾಗಿ ಮೊದಲು ಇಲಕಲ್ ಸೀರೆಗೆ, ಮುತ್ತಿನಂಥ ಬಿಳಿಜೋಳಕ್ಕೆ ಹೆಸರಾಗಿದ್ದು ಈ ತಾಲೂಕು. ಇಂದು ಗ್ರ್ಯಾನೈಟ್‌ಶಿಲೆ ಹಾಗೂ ಕಬ್ಬಿಣದ ಅದಿರಿಗಾಗಿ ಲೋಕಕ್ಕೆಲ್ಲ ಪರಿಚಿತವಾಗಿದೆ. ವಿಶೇಷತೆಗಳ ತವರೂರಾದ ಹುನಗುಂದ ಪ್ರದೇಶ ತನ್ನದೆಯಾದ ಚಾರಿತ್ರಿಕ ಹಿನ್ನಲೆಯನ್ನು ಹೊಂದಿದೆ.[1]

## ಹುನಗುಂದ ಪ್ರದೇಶದ ಭೌಗೋಳಿಕ ಲಕ್ಷಣಗಳು :

ಯಾವುದೇ ಒಂದು ಪ್ರದೇಶದ ಇತಿಹಾಸವನ್ನೆ ಸಂಪೂರ್ಣವಾಗಿ ಅಧ್ಯಯನ ಮಾಡಬೇಕಾದರೆ ಅದರ ಸರ್ವಾಂಗೀಣ ಭೌಗೋಳಿಕ ಹಿನ್ನಲೆಯು ಅವಶ್ಯಕವಾಗಿರುತ್ತದೆ. ಒಂದು ಅಧ್ಯಯನಕ್ಕೆ ಪೂರಕವಾದ ಅಂಶಗಳನ್ನು ಅರ್ಥೈಸಿಕೊಳ್ಳಲು ಭೌಗೋಳಿಕ ಹಿನ್ನಲೆ ಅವಶ್ಯವಾಗಿದೆ. ಚರಿತ್ರೆ ಮತ್ತು ಭೂಗೋಳಶಾಸ್ತ್ರದ ಸಂಬಂದವನ್ನು ಗುರ್ತಿಸಲು ಭೌಗೋಳಿಕ ಲಕ್ಷಣ ಅಧ್ಯಯನ ಬಹಳ ಮಹತ್ವವಾದು.

ಹುನಗುಂದ ತಾಲೂಕು ಕರ್ನಾಟಕದ ಮಹತ್ವದ ತಾಲೂಕುಗಳಲ್ಲೊಂದು. ಬಾಗಲಕೋಟ ಜಿಲ್ಲೆಯ ಆಗ್ನೇಯಕ್ಕೆ ಬರುವ ಈ ತಾಲೂಕು, ತಾಲೂಕಿನ ಆಡಳಿತ ಕೇಂದ್ರ ಈ ತಾಲೂಕನ್ನು ದಕ್ಷಿಣ ಮತ್ತು ಪೂರ್ವದಲ್ಲಿ ರಾಯಚೂರ ಜಿಲ್ಲೆಯ ಕುಷ್ಟಗಿ ಮತ್ತು ಲಿಂಗಸೂರ ತಾಲೂಕುಗಳು ಉತ್ತರದಲ್ಲಿ ಮುದ್ದೇಬಿಹಾಳ ವಿಜಾಪೂರ ಜಿಲ್ಲೆ ಬಸವನ ಬಾಗೇವಾಡಿ ಪಶ್ಚಿಮದಲ್ಲಿ ಬದಾಮಿ ಮತ್ತು ಬಾಗಲಕೋಟ ತಾಲೂಕುಗಳು. ಸುತ್ತವರಿದ್ದಿ ಸಾಮಾನ್ಯ ಕುರುಚಲುಗಿಡಗಳು, ಸುಮಾರು 9790 ( 1963-64) ಹೆಕ್ಟೇರ್‌ಗಳಲ್ಲಿ ಅರಣ್ಯ ಪ್ರದೇಶವಿದೆ. ಹುನಗುಂದ ತಾಲೂಕು ಉತ್ತರ ಅಕ್ಷಾಂಶದಲ್ಲಿ 75, 50, ರಿಂದ 76, 22 ರವರೆಗೆ ಪೂರ್ವದಲ್ಲಿ ರೇಖಾಂಶದಲ್ಲಿ $15.52^{0}$ ರಿಂದ 16, $14^{0}$ ರಲ್ಲಿದೆ. ಸಮುದ್ರ ಮಟ್ಟದಲ್ಲಿ 450 ರಿಂದ 800 ಮೀಟರ್ ಎತ್ತರವಿರುವ ತಾಲೂಕಿನ ಒಟ್ಟು ವಿಸ್ತೀರ್ಣ 1,254.22 ಹೇಕ್ಟರ್, ಆಡಳಿತ ಅನುಕೂಲಕ್ಕಾಗಿ ನಾಲ್ಕು ಹೊಬಳಿಗಳ, ಕರಡಿ, ಹುನಗುಂದ, ಅಮೀನಗಡ, ಇಲಕಲ್- ಎರಡು ಪಟ್ಟಣಗಳು ಹುನಗುಂದ, ಇಲಕಲ್ 168 ಗ್ರಾಮುಗಳನ್ನು ಹೊಂದಿದೆ. 2011 ರ ಜನಗಣತಿ ಪ್ರಕಾರ ಜನಸಂಖ್ಯೆ[2]

## ಹವಾಗುಣ - ಮಳೆ :

ಹುನಗುಂದ ತಾಲೂಕಿನ ಪೂರ್ವದಲ್ಲಿ ಬೇಸಿಗೆಯ ಉಷ್ಣತೆ 40 ಡಿಗ್ರಿ ಸೆಂಟಿಗ್ರೇಡ್ ಇದೆ. ಉತ್ತಮ ಹವಾಮಾನ ಇದೆ. ಪಶ್ಚಿಮಕ್ಕೆ ಸೇರಿದಂತೆ ಹವಾಮಾನ ಕಡಿಮೆ ಎನಿಸುತ್ತದೆ.

ತಾಲೂಕಿನ ಹೆಚ್ಚು ಪ್ರದೇಶ ಮಟ್ಟದ ಭೂಮಿ ಆದರೂ ಇಲ್ಲಿಯ ವಾಯುಗುಣ ಸಾಮಾನ್ಯವಾಗಿ ಹಿತಕರವಾಗಿದೆ. ಮುಂಗಾರು ಮಳೆಗಾಲದ ತಿಂಗಳುಗಳಲ್ಲಿ ದಟ್ಟನೆಯ ಮೋಡಗಳಿರುತ್ತವೆ. ತಾಲೂಕಿನ ವಾರ್ಷಿಕ ಸರಾಸರಿ ಮಳೆ 572.4 ಮಿ.ಮೀ ತಾಲೂಕಿನಲ್ಲಿ 1916 ರಲ್ಲಿ ಅತಿಹೆಚ್ಚು ಹಾಗೂ 1923 ರಲ್ಲಿ ಅತೀ ಕಡಿಮೆ ಮಳೆಯಾಗಿದೆ, ತಾಲೂಕಿನಲ್ಲಿ 60ಸೆಂ.ಮೀಗಿಂತ ಹೆಚ್ಚು ದಪ್ಪವಾದ ಕಪ್ಪು ಮಣ್ಣಿನ ಭೂಮಿ ಕೃಷಿಗೆ ಹೇಳಿ ಮಾಡಿಸಿದಂತಿದೆ. ತಾಲೂಕಿನ ಒಟ್ಟು ಜನಸಂಖ್ಯೆ ಶೇ. 38.29 ರಷ್ಟು ಜನ ಕೃಷಿಕರು, ಇದರಲ್ಲಿ ಪುರುಷರು ಶೇಕಡಾ 50.46 ಹಾಗೂ ಸ್ತ್ರೀಯರ ಶೇಖಡಾ 26.4 ಕೆಂಪುಮಣ್ಣು ಮತ್ತು ಕಪ್ಪುಮಣ್ಣು ವಿಶಾಲಬಯಲಿನ ಮಧ್ಯೆ ಭೋಳುಗುಡ್ಡಗಳಿವೆ. ಹೆಚ್ಚಾಗಿ ನೈರುತ್ಯ ಮಾರುತಗಳಿಂದಲೇ ಮಳೆ ಹೆಚ್ಚು.[3]

**ಜನಸಂಪನ್ಮೂಲಗಳು :**

ಹುನಗುಂದ ಪ್ರದೇಶದಲ್ಲಿ ಕೃಷ್ಣೆ, ಮಲಪ್ರಭಾ ತಾಲೂಕಿನ ಮುಖ್ಯ ನದಿಗಳು, ಜೊತೆಗೆ ಹುನಗುಂದ ಮುಖ್ಯಾಂತರ ಹರಿಯುವ ಕಡ್ಲಪ್ಪನಹಳ್ಳ ಮತ್ತು ತಾಲೂಕಿನ ದಕ್ಷಿಣದಿಂದ ಉತ್ತರಕ್ಕೆ ಹರಿದು ಕೃಷ್ಣಾ ನದಿಯನ್ನು ಸೇರುವ ಇಲಕಲ್‌ಹಳ್ಳ ಇದೆ, ಮಲಪ್ರಭಾ ನದಿ ತಾಲೂಕಿನ ಪಶ್ಚಿಮ ಗಡಿಯಾಗಿ ಹರಿದು ಬದಾಮಿ ತಾಲೂಕನ್ನು ಬೇರ್ಪಡಿಸಿ ಹೂವಿನಹಳ್ಳ ಬಳಿ ತಾಲೂಕನ್ನು ಪ್ರವೇಶಿಸುವದು. ತಾಲೂಕಿನಲ್ಲಿ ಈಶಾನ್ಯಾಭಿಮುಖವಾಗಿ ಹರಿದು ಸಂಗಮದ ಹತ್ತಿರ ಕೃಷ್ಣಾ ನದಿಯನ್ನು ಕೂಡಿಕೊಳ್ಳುವುದು. ತಾಲೂಕಿನ ಉತ್ತರದಲ್ಲಿ ಕೃಷ್ಣಾನದಿ ತಾಲೂಕಿನ ಗಡಿಯಾಗಿ ಹರಿದು ಮುದ್ದೇಬಿಹಾಳ ತಾಲೂಕಿನ ಬೇರ್ಪಡಿಸಿದೆ- ತಾಲೂಕಿನ ವ್ಯವಸಾಯಕ್ಕೆ ಸಹಾಯಕವಾಗಿ ಬಾವಿಗಳು, ನೀರಾವರಿ ಇವೆ, ಬೂದಿಹಾಳ, ಚಿಕ್ಕಮಾಗಿ, ಅಮೀನಗಡ, ಕೂಡಲಸಂಗಮ, ಹೂವಿನೂರ, ಬೆಳಗಲ್ ಹನಿ ನೀರಾವರಿ ಬೇಸಾಯವಿದೆ. ಬಲಕುಂದಿಕೆರೆ, ಚಿತ್ತವಾಡಗಿ ಕೆರೆಯೋಜನೆ, ಮರೋಳ ಏತನೀರಾವರಿ ಪ್ರಮುಖವಾಗಿವೆ. ಜೋಳ, ಸಜ್ಜೆ, ಶೇಂಗಾ, ಭತ್ತ, ಗೋಧಿ, ಹತ್ತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.[4]

**ಕೈಗಾರಿಕೆಗಳು :**

ವ್ಯವಸಾಯವು ಪ್ರಮುಖ ಉದ್ದೇಶವಾದರೂ ಸಹ ಹುನಗುಂದ ಪ್ರದೇಶದಲ್ಲಿ ಚಿಕ್ಕ ಚಿಕ್ಕ ಕೈಗಾರಿಕೆಗಳಿವೆ. ನೇಕಾರಿಕೆ ತಾಲೂಕಿನ ನೆಲದೊಂದಿಗೆ ಬಹುಹಿಂದಿನಿಂದಲೂ ನೆಲೆ ನಿಂತಿದೆ. ಸೀರೆ, ಕಂಬಳಿ ಜಮುಖಾನ ಬಳೆ ಇಲ್ಲಿ ಪ್ರಮುಖ ಕೈಗಾರಿಕೆಗಳಾಗಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಬಾಂಬೆ ಪ್ರೆಸಿದೆನ್ಸಿ ಆಡಳಿತದಲ್ಲಿ ಇಲಕಲ್‌ನಲ್ಲಿ 12,000 ನೇಸಲ್ಲಿ ಪರಿಣಿತಿಯನ್ನು ಖಾಸಗಿ ಗಿರಣಿಗಳಿದ್ದವು. 1895ರಲ್ಲಿ ಹುನಗುಂದ ಮೊಟ್ಟಮೊದಲು ಜಿನ್ನಿಂಗ್‌ಫ್ಯಾಕ್ಟರಿ ಕಾರ್ಖಾನೆ ಆರಂಭವಾಯಿತು. ಇಲಕಲ್ ಸೀರೆ ಹೊರ ರಾಜ್ಯಗಳಲ್ಲಿ ಸುಪ್ರಸಿದ್ಧ, ತಾಲೂಕಿನ 15 ಗ್ರಾಮಗಳಲ್ಲಿ ಉಣ್ಣೆ ನೇಕಾರಿಕೆ ಉದ್ದಿಮೆಗಳಿವೆ, ಇಲಕಲ್, ಕಮತಗಿ, ಸೂಳೇಬಾವಿಗಳಲ್ಲಿ ಮುಸಲ್ಮಾನ ಕುಟುಂಬಗಳು ಜಮುಖಾನ ನೇಯ್ಗೆನಲ್ಲಿ ನಿರತವಾಗಿವೆ. ಗೂಡೂರಿನಲ್ಲಿ ಬಳೆಗಳನ್ನು ತಯಾರಿಸುತ್ತಾರೆ. ರಾಮತಾಳನಲ್ಲಿ ಕಬ್ಬಿಣ ಗಣಿಗಾರಿಕೆ ಇದೆ. ಈ ಅದಿರಿನ ಶೇಕಡಾ 64.22, ಕಬ್ಬಿಣಾಂಶ, ಶೇಕಡಾ 6.29 ಭಾಗ ಸಿಲಿಕಾ, ಹಾಗೂ ಅಲ್ಯೂಮಿನ್ ಶೇಕಡಾ 0.016, ಗಂಧಕ ಶೇಕಡಾ 0.016, ರಂಜಕವಿರುವ ದಾಖಲೆಗಳಿವೆ. ಇಲಕಲ್ ಸಿಂಕ್ ಗ್ರಾನೈಟ್ ಜಗತ್ತ ಪ್ರಸಿದ್ಧವಾಗಿದೆ

ಗೂಡೂರ, ಗೂಗ್ಗಲನುರಿ, ಬಲಕುಂದಿ, ಕೊಡಗಲಿ, ಹೊಸೂರ ಗ್ರಾಮಗಳಲ್ಲಿ 207419 ಕ್ಯಾಬಿಕ್ ಮೀಟರ್ ಗ್ರಾನೈಟ್ ಉತ್ಪನ್ನವಾಗಿದೆ. ಹೀಗೆ ಕೈಗಾರಿಕೆಗಳಿಂದ ಹುನಗುಂದ ಪ್ರದೇಶ ಬಾಗಲಕೋಟ ಜಿಲ್ಲೆಯಲ್ಲಿನೇ ಪ್ರಸಿದ್ಧವಾಗಿದೆ.[5]

**ಚಾರಿತ್ರಿಕ ಹಿನ್ನಲೆ :**

ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಹುನಗುಂದ ತಾಲೂಕಿನಗೆ ಮಹತ್ವದ ಸ್ಥಾನಮಾನಗಳಿವೆ. ಪ್ರಾಚೀನ ಕಾಲದಲ್ಲಿ ಹೆಸರು ಪಡೆದಿರುವ ಹುನಗುಂದ ವಾಸ್ತುಶಿಲ್ಪ ಮೂರ್ತಿಶಿಲ್ಪ, ಚಿತ್ರಕಲೆಗೆ ಹೆಸರುವಾಗಿಯಾಗಿದೆ. ಆದಿ ಶಿಲಾಯುಗದಿಂದಲೂ ತನ್ನದೆಯಾದ ಐತಿಹಾಸಿಕ ಹಿನ್ನಲೆ ಹೊಂದಿರುವ ಹುನಗುಂದ ತಾಲೂಕು ಬಿಜಾಪೂರ ಜಿಲ್ಲೆಯಲ್ಲಿತ್ತು. ಆದರೆ 1997 ಅಗಷ್ಟ 15 ರಂದು ಬಾಗಲಕೋಟ ಜಿಲ್ಲೆ ನೂತನವಾಗಿ ಜಾರಿಗೆ ಬಂದಿತ್ತು ಈ ಜಿಲ್ಲೆ ಭಾರತದ ದಖನ್ ಪ್ರಸ್ಥಭೂಮಿಯ ಪಶ್ಚಿಮ ಕರಾವಳಿಯಿಂದ ಸುಮಾರು 208 ಕಿ.ಮೀ. ಒಳಪ್ರದೇಶದಲ್ಲಿದೆ. ಭೌಗೋಳಿಕವಾಗಿ $15^0$ - $28^0$ ರಿಂದ $16^0$ -22 ಎತ್ತರ ಅಕ್ಷಾಂಶಗಳಲ್ಲಿ ಹಾಗೂ $70^0$ -$49^0$ ರಿಂದ $76^0$-$28^0$ ಪೂರ್ವದ ರೇಖಾಂಶಗಳ ಮಧ್ಯ ಸುಮಾರು 6593 ಚ.ಕಿ.ಮೀ ಗಳಷ್ಟು ಭೂ ಪ್ರದೇಶವನ್ನು ಆವರಿಸಿಕೊಂಡಿದೆ. ಈ ನೂತನ ಜಿಲ್ಲೆ ಆರು ತಾಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ- ಬದಾಮಿ, ಬೀಳಗಿ, ಬಾಗಲಕೋಟ, ಹುನಗುಂದ, ಮುಧೋಳ ಹಾಗೂ ಜಮಖಂಡಿ ಈ ಆರು ತಾಲೂಕಿಗಳಲ್ಲಿ 11 ವಿವಿಧ ದರ್ಜೆನಗರ -ಪಟ್ಟಣಗಳು ಮತ್ತು 599 ಜವಾಸಿತ ಹಳ್ಳಿಗಳಿವೆ. 2011 ರ ಜನಗಣತಿ ಪ್ರಕಾರ ಈ ಜಿಲ್ಲೆ ಜನಸಂಖ್ಯೆ -18,89,752, ಪುರುಷ -09,50,111 ಮಹಿಳೆ[6] ಬಾಗಲಕೋಟ ಜಿಲ್ಲೆ ಅತಿ ಪಾಚೀನ ಇತಿಹಾಸವನ್ನು ಹೊಂದಿದೆ. ಎಂಬುದಕ್ಕೆ ಸಾಕಷ್ಟು ಆಧಾರಗಳಿವೆ. ಬಾಗಲಕೋಟ ಜಿಲ್ಲೆಯ ಬದಾಮಿ, ಐಹೋಳೆ, ಪಟ್ಟದಕಲ್, ಗಲಗಲಿ, ಕಲಾದಗಿ, ಬಾಗಲಕೋಟ ಮುಂತಾದ ಸ್ಥಳಗಳು ಆಗಿನಕಾಲದಲ್ಲಿದ್ದವು ಎಂದು ಹೇಳುವ ದಂಡಕಾರಣ ಅಧ್ಯಯನ ಪ್ರಮುಖ ಸ್ಥಳಗಳು [7] ಪ್ರಸಿದ್ಧ ಗ್ರೀಕ್ ತತ್ವಜ್ಞಾನಿ ಮತ್ತು ಭೂಗೋಳಶಾಸ್ತ್ರಜ್ಞನಾದ ಟಾಲೆಮಿ ಬಾಗಲಕೋಟ ಜಿಲ್ಲೆಯ ಬದಾಮಿ ಪಟ್ಟದಕಲ್ ಬಗ್ಗೆ ಉಲ್ಲೇಖಿಸಿದ್ದಾನೆ. ಬಾಗಲಕೋಟ ಜಿಲ್ಲೆಯನ್ನು ಕ್ರಿ.ಶ. 6ನೇ ಶತಮಾನದ್ಲಿ ಬದಾಮಿ, ಚಾಲುಕ್ಯರು, 9ನೇ ಶತಮಾನದಲ್ಲಿ ರಾಷ್ಟ್ರಕೂಟರು, 10ನೇ ಶತಮಾನದಲ್ಲಿ ಕಲ್ಯಾಣದ ಚಾಲುಕ್ಯರ 12ನೇ ಶತಮಾನದಲ್ಲಿ ಕಾಲಚೂರಿಗಳು ನಂತರ ದೇವಗಿರಿ ಯಾದವರು ಆಳಿದ್ದಾರೆ ಎಂಬುದನ್ನು ನಂಬಲಾಗಿದೆ.12ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ಕಲಬೂರಿ ಅರಸರ ಕಾಲದಲ್ಲಿ ಜಗತ್ತಿಗೆ ಮೊದಲ ಧರ್ಮವನ್ನು ಬೋಧಿಸಿದ ಹಾಗೂ ಮಾನವ ಕುಲವನ್ನು ಸಮಾನತೆ ತರಲು ಪ್ರಯತ್ನಿಸಿದ ಮಹಾನ್ ಚೇತನ ಜಗಜ್ಯೋತಿ ಬಸವಣ್ಣನವರ ನಡೆದಾಢಿದ ನಾಡು ಇದಾಗಿದೆ. 16ನೇ ಶತಮಾನದಲ್ಲಿ ಆದಿಲ್‌ಷಾಹಿಗಳ ಆಳ್ವಿಕೆಗೆ ಒಳಪಟ್ಟು ಈ ಪ್ರಧೇಶಕ್ಕೆ ಬಾಗಡಿಕೋಟೆ ಎಂದು ಹೆಸರಿತ್ತು. ನಂತರ ದಿವಸಗಳಲ್ಲಿ ಬಾಗಲಕೋಟ ಎಂದು ಕರೆಯಲಾಯಿತು. ಇದು 1818 ಬ್ರಿಟಿಷರ ಆಡಳಿತಕ್ಕೆ 1837 ರಲ್ಲಿ ಧಾರವಾಡ 1864 ಬೆಳಗಾವಿ, ನಂತರ ಕಲಾದಗಿ ಜಿಲ್ಲೆಗೆ 1884 ರಲ್ಲಿ ವಿಜಾಪೂರ ಜಿಲ್ಲೆಗೆ ಸೇರಿಸಲಾಗಿತ್ತು ನಂತರ 1997ರ ಅಗಷ್ಟ 15 ರಂದು ಸ್ವತಂತ್ರ ಜಿಲ್ಲೆಯಾಗಿ ಬೇರ್ಪಟ್ಟಿತು.[8]

ಇಂತಹ ಐತಿಹಾಸಿಕ ಚರಿತ್ರೆಯನ್ನು ಹೊಂದಿರುವ ಬಾಗಲಕೋಟ ಜಿಲ್ಲೆಯ ಆರು ತಾಲೂಕಿಗಳಲ್ಲಿ ಒಂದಾದ ಹುನಗುಂದ ಸೋಲ್ಲಾಪೂರ- ಬೆಂಗಳೂರ ಮಾರ್ಗದ 13ನೇ ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಇದು ಹುನಗುಂದ ಬಾಗಕೋಟೆಯ ಆಗ್ನೇಯಕ್ಕೆ 45 ಕಿ.ಮೀ ದೂರದಲ್ಲಿ ಬಿಜಾಪೂರಕ್ಕೆ ಆಗ್ನೇಯಕ್ಕೆ 45 ಕಿ.ಮೀ ದೂರದಲ್ಲಿದೆ. ಜನಸಂಖ್ಯೆ 2011ರ ಜನಸಂಖ್ಯೆ 3,21,572 ಇರುತ್ತದೆ. ಪುರುಷರು 1,62,344, ಸ್ತ್ರಿಯರು 1,59,220 ಕ್ರಿ.ಶ. 5ನೇ ಶತಮಾನದಲ್ಲಿ ಹುನಗುಂದನ್ನು ಜೈನಮಾಂಡಲಿಕರು ಆಳುತ್ತಿದ್ದರು. ರನ್ನನಿಂದ ನರಗುಂದ, ಮುಳ್ಳನಿಂದ ಮುಳಗುಂದ, ಪೊನ್ನನಿಂದ ಹುನಗುಂದ ಸ್ಥಾಪನೆಯಾಯಿತು.

ಹುನಗುಂದ ಚಿಕ್ಕ ಗುಡ್ಡದ ಎಲೆ ಜೈನಬಸದಿ ಅವಶೇಷಗಳಿವೆ. ಇದೊಂದು ಪ್ರಾಚೀನ ಅಗ್ರಹಾರವಾಗಿದ್ದು 200 ಬ್ರಾಹ್ಮಣ ಮನೆಗಳಿವೆ. ಪೇಶ್ವೆಯವರ ಆಡಳಿತದಲ್ಲಿ ಪಾಠಿಕೆ ಎಂಬ ಬ್ರಾಹ್ಮಣ ಪುರೋಹಿತರಿಗೆ 28 ಎಕರೆ ಜಮೀನು ಪೇಶ್ವೆಯವರ ಆಡಳಿತ ಕೂಡ ಮಾಡಿತ್ತು. ಕ್ರಿ.ಶ. 1851 ರಲ್ಲಿ ಎಲಿಜಬೆತ್‌ರಾಣಿ ಅಮರಾವತಿ ದೇಸಾಯಿಯರ ಆಡಳಿತಕ್ಕೆ ವಹಿಸಿಕೊಟ್ಟರು. ಹುನಗುಂದ ತಾಲೂಕಿನಲ್ಲಿ 138 ಶಾಸನಗಳಿದ್ದು, ಇವು ಅಲ್ಲಿನ ಇತಿಹಾಸದ ಶ್ರೀಮಂತಿಕೆಯನ್ನು ಎತ್ತಿ ತೋರಿಸುತ್ತದೆ. ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲ್ಯಾಣಿ ಕಲಚೂರಿಗಳು, ವಿಜಯನಗರದ ಅರಸರು, ಆದಿಲ್‌ಷಾಯಿಗಳು, ದೇವಗಿರಿ ಯಾದವರು, ಇನ್ನೂ ಮುಂತಾದ ರಾಜ ಮನೆತನಗಳು ಮಾಂಡಲೀಕರು, ಹುನಗುಂದನ್ನು ಆಡಳಿತದ ಕೇಂದ್ರವನ್ನಾಗಿಸಿರಕೊಂಡು ರಾಜ್ಯಭಾರ ಮಾಡಿದರು. ಈ ಬಗ್ಗೆ ಕೋಟೆಗಳ, ಶಾಸನಗಳ, ಗುಹಾಲಯ, ದೇವಾಲಯಗಳು ಇಂದಿಗೂ ಜೀವಂತ ನಿದರ್ಶನಗಳಾಗಿವೆ.[9]

**ನಾಮವಿಶೇಷ(ಹೆಸರು)**

ತಾಲೂಕು ಕೇಂದ್ರವಾದ ಹುನಗುಂದ ಹಿಂಭಾಗದ ಗುಡ್ಡದಲ್ಲಿ ಬಂಗಾರದ ಛಾಯೆಗೆ ಹೋಲುವ ಹಳದಿ ಬಣ್ಣದ ಅಭ್ರಕವಿರುವದರಿಂದ ಈ ಊರಿಗೆ ಹೊನ್ನಿನಗುಂದ; ಹೊನ್ನಕುಂದ, ಎಂಬ ಹೆಸರು ಕ್ರಮೇಣ ಹುನಗುಂದ ಎಂದಾಗಿದೆ. ಕ್ರಿ.ಶ. 1074 ರಲ್ಲಿಯ 2ನೇ ಸೋಮೇಶ್ವರನ ಆಡಳಿತದಲ್ಲಿ ಶಾಸನವೊಂದು ಹೊನ್ನಗುಂದ -20 ಆಡಳಿತ ವಿಭಾಗದ ರಾಜಧಾನಿಯಾಗಿದ್ದ ಹುನಗುಂದವನ್ನು ಹೊನ್ನಗುಂದ ಎಂದು ಕರೆಯಲಾಗಿದೆ.[10]

**ಇತಿಹಾಸ ಪೂರ್ವಕಾಲ :**

ಹುನಗುಂದ ತಾಲೂಕಿನ ಪೂರ್ವ ಇತಿಹಾಸವನ್ನೆ ತಿಳಿಯಬೇಕಾದರೆ ಪುರಾತತ್ವ ಅವಶ್ಯವಾಗಿವೆ - ಆದರೆ ಕರ್ನಾಟಕ ಯಾವದೇ ಸ್ಥಳದ ಬಗ್ಗೆ, ಕಾಲಮಾನದ ಬಗ್ಗೆ ನಿಖರವಾಗಿ ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯ. ಆದರೂ ಸಹ ಸಿಕ್ಕಿರುವ ನಾಣ್ಯ ಶಾಸನ, ದೇವಾಲಯ, ಚಿತ್ರಕಲೆ, ಅವಶೇಷಗಳ ಆಧರದ ಮೇಲೆ ಹುನಗುಂದ ಪೂರ್ವ ಇತಿಹಾಸವನ್ನು ತಿಳಿಯಬಹುದು.

ಹಿರೇಮಾಗಿ ಚಿಕ್ಕಮಾಗಿ ಆದಿ ಹಳೆ ಶಿಲಾಯುಗದ ನೆಲೆಗಳಿರುವದರಿಂದ ತಾಲೂಕಿನ ಹಳ್ಳಿಗಳ ಚರಿತ್ರೆ ಸುಮಾರು 5 ರಿಂದ 2 ಲಕ್ಷ ವರ್ಷಗಳಿಂದಲೆ ಆರಂಭವಾಯಿತು ಎಂಬುದು ಸ್ಪಷ್ಟವಾಗಿದೆ. ಐಹೊಳೆಯಲ್ಲಿ ಕೈಕೊಡಲಿ, ಕ್ಲೀವರ್, ಬ್ಯೂರಿನ್ ಡಿಸ್ಕಾಯಿಡ್, ಚಾಪಣ ಮೊದಲಾದ ಆದಿ ಶಿಲಾಯುಗ ಅನೇಕ ಆಯುಧಗಳು ದೊರೆತ್ತಿರುವುದರಿಂದ ಇಲ್ಲಿ ಎಲ್ಲೆ ಆಯುಧಗಳ ಕಾರ್ಖಾನೆ ಎ ಇರಬಹುದು ಎಂಬ ತರ್ಕ ಪ್ರದೇಶದಾಗಿದೆ. ಮಲಪ್ರಭಾ ನದಿ ಪ್ರದೇಶದ ಸಿದ್ದನಕೊಳ್ಳ, ಐಹೊಳೆ, ಬೇವಿನಾಳ, ಮೊದಲಾದ ಗ್ರಾಮಗಳು ಮಧ್ಯ ಶಿಲಾಯುಗದ ನಿವೇಶನ ಬೆಳಕಿಗೆ ಬಂದಿವೆ. ಇದರಿಂದಾಗಿ 1 ಲಕ್ಷದಿಂದ 40 ಸಾವಿರ ವರ್ಷಗಳ ಹಿಂದೆ ಹಳೆ ಶಿಲಾಯುಗ ಇತ್ತೆಂದು ತರ್ಕಿಸಬಹುದು. ಸಿದ್ದನಕೊಳ್ಳದಲ್ಲಿ ಹಳದಿವರ್ಣದ ಚಪ್ಪಟೆಯಾಕರದ ಚರ್ಟಸ ತಿರುಳ್ಗಲ್ಲಿನ ಮಲೆ ಹಕ್ಕಿ ರೆಕ್ಕೆಯಂತೆ ಕಾಣುವ ರೇಖಾಚಿತ್ರ ಕೊರದಿದ್ದಾಗಿದೆ. ಇದು ಕ್ರಿ.ಶ.ಪೂ. 30000-10,000 ವರ್ಷಗಳ ಸೂಕ್ಷ್ಮ ಶಿಲಾಯುಗ ಸರಿಸಾಟಿಗೆ ಸಾಕ್ಷಿಯಾಗಿದೆ.[11]

**ಇತಿಹಾಸ ಕಾಲ :**

ಸಾಹಿತ್ಯ , ಕಲೆ, ಮತ್ತು ವಾಸ್ತುಶಿಲ್ಪ ಸಂಸ್ಕೃತಿ ಇತಿಹಾಸ ಮುಂತಾದ ಕ್ಷೇತ್ರಗಳಲ್ಲಿ ಐತಿಹಾಸಿಕವಾಗಿ ಪ್ರಸಿದ್ದ ಪಡೆದ ಹುನಗುಂದ ತನ್ನದೆಯಾದ ಇತಿಹಾಸವನ್ನು ರೂಪಿಸಿಕೊಂಡಿದೆ. ಬದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲ್ಯಾಣಿ ಕಲಾಚೂರಿಗಳು, ವಿಜಯನಗರ ಅರಸರು, ಬಿಜಾಪೂರದ ಆದಿಲ್‌ಷಾಹಿಗಳು, ದೇವಗಿರಿಯ ಯಾದವರು, ಮಾಂಡಲೀಕರು ಹುನಗುಂದ ಪ್ರದೇಶದಲ್ಲಿ ಆಡಳಿತ ಮಾಡಿದ್ದಾರೆ ಎಂಬುದಕ್ಕೆ ಅನೇಕ ಆಧಾರಗಳು ಲಭ್ಯವಾಗಿವೆ. ಅವುಗಳ ಆಧಾರದ ಮೇಲೆ ಇತಿಹಾಸ ಕಾಲವನ್ನು ಅರಿಯಬಹುದು.

ಕ್ರಿ.ಶ. ಪೂ. 1ನೇ ಶತಮಾನದಿಂದ ಕ್ರಿ.ಶ. 3ನೇ ಶತಮಾನದ ರಾಜ್ಯಭಾರ ಮಾಡಿದ ಶಾತವಾಹನರ ನಾಣ್ಯ "ಮಹಾರಥಿ" ನಾಣ್ಯಗಳ ಐಹೊಳೆಯಲ್ಲಿ ಲಭ್ಯವಾಗಿರುವದರಿಂದ ಈ ಪ್ರದೇಶ ಅವರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ಸುಸ್ಪಷ್ಟ. ಹಿರೇಮಾಗಿಯಲ್ಲಿ ದೊರೆತಿರುವ ಪೊಟೀನ್ ನಾಣ್ಯಗಳಲ್ಲಿ ಮಹಾರಠಿಸ ಎಂಬ ಬ್ರಾಹ್ಮೀ ಲೇಖನವಿದೆ. ಆದ್ದರಿಂದ ಮಹಾರಠಿ ನಾಣ್ಯಗಳೆಂದ ಇತಿಹಾಸಕಾರರ ಅಭಿಪ್ರಾಯವಾಗಿದೆ. ಹುನಗುಂದದಲ್ಲಿ ದೊರೆತ ಗುಪ್ತನಿಧಿಯಲ್ಲಿ ಸೇಉಣ ರಾಮಚಂದ್ರ 11 ನಾಣ್ಯಗಳು ದೊರೆತ್ತಿವೆ. ಹುನಗುಂದ ಪ್ರದೇಶ ಶಾತವಾಹನರಿಂದ ಹಿಡಿದ ಕ್ರಿ.ಶ. 1787 ರಲ್ಲಿ ನಿಜಾಮನ ಕೈಸೇರಿತು. ನಂತರ ಪೇಶ್ವೆಗಳ ಆಡಳಿತದಿಂದ ಬ್ರಿಟಿಷ್‌ರಿಗೆ ಹಸ್ತಾಂತರವಾಯಿತು.[12]

ಕ್ರಿ.ಶ. 1818 ರಿಂದ 1837 ರವರೆಗೆ ಧಾರವಾಡ ಕಲೆಕ್ಟೋರೇಟ್‌ಗಳ ವ್ಯಾಪ್ತಿಯಲ್ಲಿದ್ದು ಹುನಗುಂದ ತಾಲೂಕು ನಂತರ ಕಲಾದಗಿ ಕಲೆಕ್ಟೋರೇಟ್ ಆಡಳಿತಕ್ಕೆ ಒಳಪಟ್ಟಿತು. ಕ್ರಿ.ಶ. 1885 ರಲ್ಲಿ ವಿಜಾಪೂರ ಜಿಲ್ಲಾ ಕೇಂದ್ರದಲ್ಲಿ ಸೇರಿದ ತಾಲೂಕು 1997 ರಲ್ಲಿ ವಿಭಜನೆಗೊಂಡ ಬಾಗಲಕೋಟ ಜಿಲ್ಲಾಡಳಿತಕ್ಕೆ ಬಂದಿದೆ. ಹುನಗುಂದ 1074ರ ತರ್ದಲಾಡಿ ಆಳುತ್ತಿದ್ದ ನಾಕಿಮಯ್ಯನ ಶಾಸನದಲ್ಲಿ ಮಹಾಮಂಡಳೇಶ್ವರ ಲಕ್ಷ್ಮೀರಸನು ಬೆಳ್ವಲ-200, ಪುಲಗೇರಿ -300 ಗಳನ್ನು ಆಳುತ್ತಿದ್ದಾಗ ಪೊನ್ನಾಗುಂದದ ಪ್ರಮುಖ ಕಾರಣಗಳು ಪೊನ್ನಗುಂದ ಬಸದಿಗೆ 20 ಮತ್ತರ ಭೂಮಿಯನ್ನು ದಾನಮಾಡಿದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. 6ನೇ ಶತಮಾನದಲ್ಲಿ ಐಹೊಳೆಯಲ್ಲಿ ವಿಶ್ವವಿದ್ಯಾಲಯವೊಂದು ಇತ್ತು ಅಲ್ಲಿ ರವಿಕೀರ್ತಿ ಕುಲಪತಿಯಾಗಿದ್ದ. ಶಿಲ್ಪಕಲೆಯನ್ನು ಕಲಿಸಲಾಗುತ್ತಿತ್ತು. ಐಹೊಳೆಯ ಐನೊರ್ವಕ ಎಂಬ ವ್ಯಾಪಾರಿಯ ಶ್ರೇಣಿ ಇತ್ತು. ಹಾಗೂ ಕಲ್ಯಾಣಿ ಚಾಲುಕ್ಯರ ದ್ವಿತೀಯ ರಾಜಧಾನಿಯಾಗಿದ್ದ ಅರಸಿಬೀದಿ ಅಥವಾ ವಿಕ್ರಮಪೂರ ಅಂದಿನ ಬ್ರಹ್ಮಾಪುರಿಯಾಗಿತ್ತು. 1047 ಕ್ಕಿಂತ ಪೂರ್ವದಲ್ಲಿ ಇದು ವಿದ್ಯೆ ಕೇಂದ್ರವಾಗಿತ್ತು.[13]

ಅರಸಿಬೀದಿಯ 1047ರ ಜಿನಾಲಯದ ಶಾಸರ, ಕಿಸುಕಾಡು-70 ಆಳುತ್ತಿದ್ದ ಅಕ್ಕದೇವಿ ವಿಕ್ರಮಪೂರ ರಾಜಧಾನಿ ಬಗ್ಗೆ ಉಲ್ಲೇಖ, ನಂದವಾಡಿಗೆಯ ಶಾಸನ ಕ್ರಿ.ಶ.1055 ರಲ್ಲಿ ವರದಿಯ ಪ್ರಕಾರ ತ್ರೈಲೋಕ್ಯಮಲ್ಲನು ರಾಜ್ಯಭಾರ ಮಾಡುತ್ತಿದ್ದ ಎಂಬುದಕ್ಕೆ ಅಲ್ಲಿಯ ಶಾಸನ ಉಲ್ಲೇಖಿಸಿದೆ. ಹೀಗೆ ಕಂದಗಲ್, ಹೀರೆಶಿಂಗನಗುತ್ತಿ, ಕೂಡಲಸಂಗಮ, ಸೂಳಿಭಾವಿ ಮುಂತಾದ ಕೇತ್ರಗಳಲ್ಲಿ ಸಿಕ್ಕಿರುವ ಶಾಸನಗಳಿಂದ ಆ ಕಾಲದ ಇತಿಹಾಸವನ್ನು ಅರಿಯಬಹುದು.[14]

ಕ್ರಿ.ಶ. 1837 ಸೇಂಟ್ ಜಾರ್ಜಗೆಜೆಟ್ ಉಲ್ಲೇಖದ, ಪ್ರಕಾರ ಹುನಗುಂದ ತಾಲೂಕಿನ ಧನ್ನೂರಿನ ಅಂಚೆ ಕಛೇರಿಯು ಮದ್ರಾಸಿನ ಪೋಷ್ಟಮಾಸ್ತರ ಜನರಲ್ ಆಧೀನದಲ್ಲಿ ಕಾರ್ಯ ನಿರ್ವಹಿಸುತ್ತಿತ್ತು. 1921 ಅಸಹಕಾರ ಚಳುವಳಿಯುಲ್ಲಿ ಹುನಗುಂದ ನಾರಯಣ್‌ರಾವ್, ರ್‌ಪವೇಂದ್ರದೇಸಾಯಿ, ಮಧ್ವರಾಜಪ್ಯಾಟಿ, ಬಸ್ಸೆಟ್ಟೆಪ್ಪ, ಬಳೂಟಗಿ ಹಾಗೂ ಪ್ರಣೇಶಾಚಾರ್ಯ ಶಾಲೆ ಬಿಟ್ಟು ಚಳುವಳಿಯಲ್ಲಿ ಭಾಗವಹಿಸಿದ್ದಾರೆ![15] ಅದೇ ಈ ಸಹಕಾರ ಚಳುವಳಿಯಿಂದಾಗಿ ಹುಟ್ಟಿದ ರಾಷ್ಟ್ರೀಯ ಶಾಲೆಗಳ ಪೈಕಿ 1921 ರಲ್ಲಿ ಹುನಗುಂದ ರಾಮಲಿಂಗೇಶ್ವರ ದೇವಾಲಯದಲ್ಲಿ ನಡೆಯತಿತ್ತು. ಖಾದಿ ಪ್ರಚಾರದಲ್ಲಿ ಇಲಕಲ್, ಕಮತಗಿ, ಗೂಡೂರ, ಅಮೀನಗಡ, ಜನಜಾಗೃತಿ ಮೂಡಿಸಿದವು. 1923 ರಲ್ಲಿ ನಾಗಪೂರ, ಧ್ವಜ ಸತ್ಯಾಗ್ರಹದಲ್ಲಿ ಧ್ವಜದೊತ್ತ ಕಾರ್ಯಕರ್ತರು ಹುನಗುಂದದಿಂದ ಮಾಧವರಾವ್‌ಪ್ಯಾಟಿ ಭಾಗವಹಿದ್ದರು. ಹೀಗೆ ಹುನಗುಂದ ಆದಿ ಶಿಲಾಯುಗದಿಂದ ಹಿಡಿದ ಇತಿಹಾಸ ಕಾಲದವರೆಗೆ ಸಾಕಷ್ಟು ಹಿಗುತ್ತಕುಗ್ಗುತ ತನ್ನ ನೆಲೆಗಳನ್ನು ಉಳಿಸಿ ಬೆಳಿಸಿಕೊಂಡು ಬಂದ ಸ್ವಾತಂತ್ರ ಹೋರಾಟಗಳಲ್ಲಿಯೂ ತನ್ನ ಗುರ್ತನ್ನು ದಾಖಲಿಸಿದೆ,

**ಅಡಿ ಟಿಪ್ಪಣಿಗಳು :**

೧) ಪುರಾಣಿಕ ಇಂದುಮತಿ (ಲೇಖನ) ಹೊನ್ನಸಿರಿ-ನಮ್ಮ ತಾಲೂಕು ಒಂದು ನೋಟ-ಹುನಗುಂದ ೨೦೦೭ ಪು.ಸಂ. ೩

೨) ಮುನಿಸ್ವಾಮಿ ಆರ್. (ಸಂ) ಬಿಜಾಪೂರ ಜಿಲ್ಲೆ ಗ್ಯಾಸೆಲಿಯರ್ ಬೆಂಗಳೂರ - ೧೯೯೯ ಪು.ಸಂ.-೫

೩) ವ್ಹಾಯ್. ಎಚ್.ಸಿ. ಹುನಗುಂದ (ಪ್ರಬಂಧ) ನಾಡಿನ ಹತ್ತೂರ ಶಿಲ್ಪಕಲೆ-ಧಾರವಾಡ ೧೯೯೮ ಪು.ಸಂ-೫

೪) ಎಂ. ಬಿ. ಮೇಟಿ (ಲೇಖನ) ಹೊನ್ನಸಿರಿ ತಾಲೂಕಿನ ನೈಸರ್ಗಿಕ ಸಂಪತ್ತು-ಹುನಗುಂದ ೨೦೦೭- ಪು.ಸಂ. -೨೧

೫) ಮುನಿಸ್ವಾಮಿ ಆರ್. (ಸಂ) ಬಿಜಾಪೂರ ಜಿಲ್ಲೆ ಗ್ಯಾಸೆಲಿಯರ್-ಬೆಂಗಳೂರ - ೧೯೯೯ ಪು.ಸಂ.-೧೯, ೪೨

೬) ಕಂಠಿ ಹನಮಂತರಾಯ (ಸಂ) ಬಾಗಲಕೋಟ ಜಿಲ್ಲಾ ದರ್ಶನ-ಬಾಗಲಕೋಟ ಪು.ಸಂ.-೧

೭) ಕಂಠಿ ಹನಮಂತರಾಯ (ಸಂ) ಬಾಗಲಕೋಟ ಜಿಲ್ಲಾ ದರ್ಶನ-ಬಾಗಲಕೋಟ ಪು.ಸಂ.-೨

೮) ಕಂಠಿ ಹನಮಂತರಾಯ (ಸಂ) ಬಾಗಲಕೋಟ ಜಿಲ್ಲಾ ದರ್ಶನ-ಬಾಗಲಕೋಟ ಪು.ಸಂ.-೩

೯) ವ್ಹಾಯ್. ಎಚ್.ಸಿ. ಹುನಗುಂದ (ಪ್ರಬಂಧ) ನಾಡಿನ ಹತ್ತೂರ ಶಿಲ್ಪಕಲೆ-ಧಾರವಾಡ ೧೯೯೮ - ಪು.ಸಂ. - ೬

೧೦) ಪುರಾಣಿಕ ಇಂದುಮತಿ (ಲೇಖನ) ಹೊನ್ನಸಿರಿ-ನಮ್ಮ ತಾಲೂಕು ಒಂದು ನೋಟ-ಹುನಗುಂದ ೨೦೦೭ - ಪು.ಸಂ.೩

೧೧) ಪುರಾಣಿಕ ಇಂದುಮತಿ (ಲೇಖನ) ಹೊನ್ನಸಿರಿ-ನಮ್ಮ ತಾಲೂಕು ಒಂದು ನೋಟ, ಹುನಗುಂದ ೨೦೦೭ - ೪

೧೨) ಮುನಿಸ್ವಾಮಿ ಆರ್. (ಸಂ) ಬಿಜಾಪೂರ ಜಿಲ್ಲೆ ಗ್ಯಾಸೆಲಿಯರ್ ಬೆಂಗಳೂರ - ೧೯೯೯ ಪು.ಸಂ. - ೪೬

೧೩) ಮುನಿಸ್ವಾಮಿ ಆರ್. (ಸಂ) ಬಿಜಾಪೂರ ಜಿಲ್ಲೆ ಗ್ಯಾಸೆಲಿಯರ್ ಬೆಂಗಳೂರ - ೧೯೯೯ ಪು.ಸಂ. -೯೩

೧೪) ಮುನಿಸ್ವಾಮಿ ಆರ್. (ಸಂ) ಬಿಜಾಪೂರ ಜಿಲ್ಲೆ ಗ್ಯಾಸೆಲಿಯರ್ ಬೆಂಗಳೂರ - ೧೯೯೯ ಪು.ಸಂ. -೯೪

೧೫) ಪುರಾಣಿಕ ಇಂದುಮತಿ (ಲೇಖನ) ಹೊನ್ನಸಿರಿ-ನಮ್ಮ ತಾಲೂಕು ಒಂದು ನೋಟ ಹುನಗುಂದ ೨೦೦೭ ಪು.ಸಂ.-೬

# ಅಧ್ಯಾಯ - ಮೂರು

## ಮೂರ್ತಿಶಿಲ್ಪದ ಉಗಮ ಹಾಗೂ ವಿಕಾಸ :

ಭಾರತೀಯ ದೇವಾಲಯಗಳ ರಚನೆಯಲ್ಲಿ ಶಿಲ್ಪಗಳ ಪಾತ್ರ ವಾಸ್ತುವಿನಷ್ಟೇ ಪ್ರಮುಖವಾಗಿದೆ. ಮೂರ್ತಿ ಶಿಲ್ಪಕ್ಕೆ ತನ್ನದೆಯಾದ ಚರಿತ್ರೆ ಇದೆ. ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು ಪ್ರಸಿದ್ಧವಾದ ಅರವತ್ತುನಾಲ್ಕು ಕಲೆಗಳಿಗೆ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಮಾನಸಾರ ಎಂಬ ಗ್ರಂಥ ಈ ಎಲ್ಲ ಅಂಶಗಳನ್ನು ಹೇಳುತ್ತದೆ.[1]

ಶಿಲ್ಪವೆನ್ನುವ ಪದವು ಮೂರ್ತಿ ಶಿಲ್ಪವೆಂಬ ಅರ್ಥದಲ್ಲಿ ರೂಢಿಗತವಾಗಿದ್ದರೂ, ಅದಕ್ಕೆ ತನ್ನದೆಯಾದ ಖಚಿತಾರ್ಥವಿದೆ. ಶಿಲ್ಪಂಕರ್ಮಕಲಾಧಿಶಂ ಇದು ಅಮರಸಿಂಹನ ಅಮರಕೋಶದ ವಿವರಣೆ ಕರ್ತೃವಿನ ಅಧಿಕ ಕೌಶಲ್ಯವನ್ನೊಳಗೊಂಡ ಕರ್ಮ ಅಥವಾ ಕ್ರೀಯೆಗೆ ಶಿಲ್ಪವೆಂದು ಹೆಸರು. "ಶಿಲ್ಪ ಶಬ್ದಸ್ತುಪುನರಿ ಶೀಲಸಮಧೌ ಇತಿಧಾತೋಃ ಮಾನಸಃ ಸಮಾಧಾನಕಾರಶಂವಸ್ತು ಜಾತಮಿತ ಉತ್ಪದ್ಯತೇ" ॥ ಶಿಲ್ಪ ಶಬ್ದವು ಮನಸ್ಸಿಗೆ ಸಮಾಧಾನವನ್ನೂ ಉಂಟುಮಾಡುವ ಕ್ರೀಯೆಯಾಗಿದ್ದು ಕಲೆಯ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ.[2]

ಭಾರತೀಯ ವಾಸ್ತು ವಿನ್ಯಾಸವನ್ನು ಗಮನಿಸಿದಾಗ ಶಿಲ್ಪಗಳ ಪಾತ್ರವೆ ಪ್ರಮುಖವೆನಿಸುತ್ತದೆ. ಗರ್ಭಗುಡಿಯಿಂದ ಹಿಡಿದು ನವರಂಗ, ಒಳದೇವಕೋಷ್ಟಕಗಳು, ದ್ವಾರಬಂಧಗಳು, ಸ್ತಂಭಗಳು, ಹೊರ ಆವರಣದ ಭಿತ್ತಿಯ ಭಾಗಗಳು, ಬೋದಿಗೆ, ಶಿಖರಾಂತದವರೆಗೂ, ಪ್ರಕಾರ ಮಂಟಪಗಳ ರಚನೆಗಳಲ್ಲೂ, ಮುಖಮಂಟಪ, ಕಲ್ಯಾಣಮಂಟಪ, ನಂದಿಮಂಟಪ, ಮುಂತಾದ ಎಲ್ಲ ಅಂಗಗಳಲ್ಲೂ ಶಿಲ್ಪಕಲೆಯು ಆವೃತವಾಗಿರುತ್ತವೆ. ಶಿಲ್ಪರಹಿತ ದೇವಾಲಯಗಳ ರಚನೆ ನಮ್ಮ ಸಂಸ್ಕೃತಿಯ ವ್ಯಾಪ್ತಿಯಲ್ಲಿ ಊಹಿಸಲು ತರವಲ್ಲ. ಶಿಲ್ಪಕಾರನು ಶಿಲ್ಪವನ್ನು ಸಂಯೋಜಿಸುವಾಗ ಪ್ರತಿಷ್ಠಾ ಮೂರ್ತಿಯನ್ನು ಅಂತರಂಗದಲ್ಲಿರಿಸಿಕೊಂಡು ಕಥಾರೂಪವಾಗಿಯೇ ಘಟನಾವಳಿಗಳ ರೂಪದಲ್ಲೋ, ಮೂರ್ತಿಶಾಸ್ತ್ರದ ರೀತಿಯಲ್ಲೋ ಮೂಲ ವಿಗ್ರಹದ ರೂಪಗಳಲ್ಲೋ ಶಿಲ್ಪಗಳ ಸಂಯೋಜನೆ ಒಂದು ರೂಪರೇಷವನ್ನು ಸಿದ್ಧಪಡಿಸಿಕೊಂಡು ವಿನ್ಯಾಸ ಸಿದ್ಧಪಡಿಸುತ್ತಾನೆ.[3]

ಸಾಮಾನ್ಯವಾಗಿ ಎಲ್ಲ ಕಲೆಗಳಿಗೂ ಹೇಳುವಂತೆ ಮೂರ್ತಿ ಶಿಲ್ಪಕ್ಕೂ ದೈನಿಕವಾದ ಮೂಲವನ್ನು ಹೇಳುತ್ತವೆ ವಾಸ್ತುಶಿಲ್ಪದ ಉಗಮವನ್ನು "**ಮಾನಸಾರ**" ನಿರ್ದೇಶಿಸುವ ರೀತಿ ಹೀಗಿದೆ. ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ , ತ್ವಷ್ಟ್ಯ, ಮತ್ತು ಮನು ಹುಟ್ಟಿದರು ಇವರ ನಾಲ್ಕುಜನ ಮಕ್ಕಳು ಕ್ರಮವಾಗಿ ಸ್ಥಪತಿ, ಸೂತ್ರಗ್ರಾಹಿ, ವರ್ಧಕಿ, ಮತ್ತು ತಕ್ಷಕ, ಎಂಬುವರು. ಇವರಿಂದ ವಾಸ್ತುಕಲೆ ಬೆಳೆಯಿತು. ಸೂತ್ರಗ್ರಾಹಿ ಶಿಲ್ಪಶಾಸ್ತ್ರ ಬಗ್ಗೆ ತಿಳಿಸಿದ್ದನು ಎಂಬುದು ಈ ಗ್ರಂಥದ ಉಲ್ಲೇಖ - ಜೊತೆಗೆ ಶಿಲ್ಪರತ್ನ, ವಾಸ್ತುಚಂದ್ರಿಕೆ, ಸುಪ್ರಭೇದ ಕಾಮಿಕ, ಆಗಮಗಳು, ಮತ್ಸ್ಯಪುರಾಣ, ಮೊದಲಾದ ಗ್ರಂಥಗಳ ಈ ದೈವಿಕ ಮೂಲವನ್ನು ಹೇಳಲು ಪ್ರಯತ್ನಿಸಿವೆ.[4]

ಗುಹೆಗಳಲ್ಲಿ ಮರದ ಪೊಟರಗಳಲ್ಲಿ ವಾಸಿಸುತ್ತಿದ್ದ ಆದಿಮಾನವ ವಾಸಕ್ಕೆ ಅನುಕೂಲವಾದ ಕಟ್ಟಡಗಳನ್ನು ಕಟ್ಟಿಕೊಳ್ಳವುದನ್ನು ಕಲಿತಾಗ ನಾಗರಿಕತೆಯ ಜೀನವದಲ್ಲಿ ಬಹುದೊಡ್ಡ ಹೆಜ್ಜೆಯನ್ನು ಆತ ಇಟ್ಟಂತಾಯಿತು. ಕ್ರಮೇಣ ಅನುಭವ ಬೆಳೆದಂತೆ ಸನ್ನಿವೇಶ ಬದಲಾದಂತೆ,

ಕಟ್ಟಡಗಳ ನಿರ್ಮಾಣಕ್ಕೆ ಕೈಹಾಕಿದಾಗ ಸೌಂದರ್ಯದ ಅರಿವು ಮೂಡಿ ನಾಗರೀಕತೆಗಳ ಬೆಳವಣಿಗೆಗೆ ಕಾರಣವಾಗಿ, ಬೆಬಿಲೋನಿಯ, ಈಜಿಪ್ತ, ಚೈನಾ, ಗ್ರೀಕ್, ಸಿಂಧೂ ನಾಗರಿಕತೆಗಳು ಪ್ರಥಮವಾಗಿ ನಮಗೆ ಮಾನವ ಜೀವನದ ಚಿತ್ರಣವನ್ನು ಚಿತ್ರಕಲೆ, ಉಬ್ಬುಶಿಲ್ಪ, ವಾಸ್ತು ರಚನೆ, ಮತ್ತು ಶಿಲ್ಪಕಲೆಗಳ ಮುಖಾಂತರ ಪರಿಚಯ ಮಾಡಿಕೊಡುತ್ತವೆ. ನಂತರದ ಪುರಾತನ ಐತಿಹಾಸಿಕ ಗ್ರೀಕ್ ಹಾಗೂ ರೋಮ್ ಸಾಮ್ರಾಜ್ಯದ ಬೆಳವಣಿಗೆಯಲ್ಲಿ ಅಮೃತಶಿಲೆಯ ಬಳಕೆ, ಪ್ರಮಾಣ ಬದ್ಧವಾದ ಅಂಗಾಂಗಗಳ ನೈಜರೂಪದ ಕಲಾತ್ಮಕತೆ, ಮಾನವಾ ಕೃತಿಯ ರಚನೆಗಳು ದೊರೆಯುತ್ತವೆ. ಶಿಲ್ಪಗಳೂ ಪ್ರತಿಮಾರೂಪದಲ್ಲಿ ರಚಿಸಲ್ಪಡುತ್ತವೆ. ದೈವಿ ಆರಾಧನಾ ವಿಭಿನ್ನತೆ, ವೈವಿದ್ಯತೆ, ಮತ್ತು ವಿಶೇಷತೆ ಶಿಲ್ಪಕಲೆಯ ಅಭಿವ್ಯಕ್ತತೆಯನ್ನು ಶ್ರೀಮಂತಗೊಳಿಸಿದೆ. ಈ ಎಲ್ಲಾ ಹಿನ್ನಲೆ ಹಾಗೂ ಆಧಾರ ಗ್ರಂಥಗಳ ಸಹಾಯದಿಂದ[5] ಮೂರ್ತಿಶಿಲ್ಪಗಳ ಉಗಮ ಹಾಗೂ ವಿಕಾಸವನ್ನು ಅಧ್ಯಯನ ಮಾಡಬಹುದಾಗಿದೆ.

ಭಾರತಖಂಡದಲ್ಲಿಯೂ ಈ ಎರಡು ಕಲೆಗಳು ಅವಿನಾಭಾವ ಸಂಬಂಧದಿಂದ ಬೆಳೆದು ಬಂದವು ವಾಸ್ತುಶಿಲ್ಪ ಪ್ರಮುಖವಾಗಿ ಧಾರ್ಮಿಕ ಕಟ್ಟಡಗಳ ನಿರ್ಮಾಣದ ಘಟ್ಟವನ್ನು ತಲುಪಿದಾಗ ಆ ಕಟ್ಟಡಗಳಲ್ಲಿ ಪ್ರತಿಷ್ಠಾಪಿಸುವ ಮೂರ್ತಿಗಳ ನಿರ್ಮಾಣದ ಶಿಲ್ಪಕಲೆ ಅದಕ್ಕೆ ಅನಿವಾರ್ಯವಾದ ಒಂದು ಅಂಗವಾಗಿ ಪರಿಣಮಿಸಿತು. ವಾಸ್ತುಶಿಲ್ಪ ದೇವರುಗಳ ಆಲಯವನ್ನು ಕಟ್ಟಿದರೆ ಮೂರ್ತಿ ಶಿಲ್ಪ ಆ ದೇವರುಗಳ ಕಲ್ಪನೆಗೆ ಸಾಂಕೇತಿಕವಾದ ವ್ಯಕ್ತ ಸ್ವರೂಪವನ್ನು ಕೊಡಲು ಪ್ರಯತ್ನಿಸಿತು. ಅಂದರೆ ಧಾರ್ಮಿಕ ಶ್ರದ್ಧೆಯೇ ಮೂರ್ತಿಶಿಲ್ಪ ಉಗಮಕ್ಕೆ ಕಾರಣವಾಯಿತು. ಭಾರತೀಯ ವಾಸ್ತುಶಿಲ್ಪ ಅವಲೋಕಿಸಿದಾಗ ವಾಸ್ತುಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಮೂರ್ತಿಶಿಲ್ಪಕ್ಕೆ ಲಭಿಸುತ್ತದೆ ಕ್ರಿ.ಪೂ. 3000 ಕ್ಕೆ ಮುನ್ನ ಅನೇಕ ಸುಂದರವಾದ ಮೂರ್ತಿಗಳು ಸಿಕ್ಕಿವೆ. ಲಿಂಗ, ಪ್ರಾಣಿವಟ್ಟ, ವೃಷಭ, ಮತ್ತು ಪ್ರಾಣಿಗಳು ಹಾಗೂ ಮನುಷ್ಯದೇಹ ನಿರ್ಮಾಣದಲ್ಲಿ ಕುಶಲತೆ ತೋರಿದ್ದಾರೆ. ಗೂಳಿ ಕಂಬವನ್ನು ಹತ್ತುತ್ತಿರುವ ಕಪಿ, ಅಳಲು, ನರ್ತನ ಭಂಗಿಯಲ್ಲಿರುವ ಸ್ತ್ರೀವಿಗ್ರಹ ಇದು ಇಲ್ಲಿ ಸಿಕ್ಕಿರುವ ಸ್ತ್ರೀ ವಿಗ್ರಹಗಳಲ್ಲಿ ಅತ್ಯಂತ ಪ್ರಾಚೀನವಾದ ಮೂರ್ತಿ ಇದಾಗಿದೆ. ಪಶುಪತಿ ಶಿವನೆಂದು ಗುರ್ತಿಸಲಾಗಿರುವ ಧ್ಯಾನಸ್ಥ ಮೂರ್ತಿ ಪ್ರಮುಖವಾಗಿದೆ.[6]

ಪ್ರಾಗೈತಿಹಾಸಿಕ ಕಾಲದಿಂದಲೂ ಮೂರ್ತಿಶಿಲ್ಪಕಲೆ ಬೆಳೆದು ಬಂದಿದೆ ಎಂಬುದು ಉತ್ಖನನಗಳಿಂದ ಸಿದ್ಧವಾಗಿದೆ. ಕುಲ್ಲ ಮತ್ತು ರಝಾಬೆ ಎಂಬಲ್ಲಿ ಕಂಡು ಬಂದ ಶಿಲ್ಪಗಳು ಸಿಂಧೂ ಸಂಸ್ಕೃತಿಗಳಿಗಿಂತ ಪ್ರಾಚೀನವೆಂದೂ ಮುಂದೆ ಇದು ಶೈಲಿಯಲ್ಲಿ ಅಭಿವೃದ್ಧಿ ಹೊಂದುತ್ತಾ ಸಾಗಿದೆ ಎಂಬುದನ್ನು ತಿಳಿಯಲು ಪುರಾಣಗಳು, ಆಗಮಗಳು, ಶಾಸನಗಳು, ನಾಣ್ಯಗಳು, ಮೊದಲಾದ ಸಾಹಿತ್ಯಿಕ ಕೃತಿಗಳು ಮೂಲ ಕಾರಗಳಾಗಿವೆ.[7]

ವೇದಗಳ ಯುಗದಲ್ಲಿ, ವಿಗ್ರಹಗಳಿಗೆ ಪ್ರಧಾನ್ಯವಿರಲಿಲ್ಲವೆಂದೂ, ಪ್ರಕೃತಿ ಶಕ್ತಿಗಳನ್ನು ಉಪಾಸಿಸಲಾಗುತ್ತಿತ್ತೆಂದೂ ಹೇಳುವುದುಂಟು. ಆದರೆ ಇಂದ್ರ, ವರುಣ, ದೇವತೆಗಳಿಗೆ ಮನುಷ್ಯಕಾರದ ಕಲ್ಪನೆಯನ್ನು ಕೊಟ್ಟಿರುವದು ಅಲ್ಲಿ ಕಾಣುತ್ತದೆ. ಪಾಣೀನಿಯು ತನ್ನ ಅಷ್ಟಾಧ್ಯಾಯದಲ್ಲಿ ವಿಕ್ರಮಿಸಿದ್ದ ದೇವತಾ ಪ್ರತಿಮೆಗಳನ್ನು ಉಲ್ಲೇಖಿಸಿದ್ದಾನೆ. ಕ್ರಿ.ಸ. 7ನೇ ಶತಮಾನದ ಪತಂಜಲಿಯ ಶಿವಸ್ಕಂದ ಪ್ರತಿಮೆ ಉಲ್ಲೇಖಿಸಿದ್ದಾನೆ. ವಶಿಷ್ಠ ಋಷಿ ಮನೆಗಳಲ್ಲಿ ವಿಗ್ರಹ ಪೂಜಿಸುತ್ತಿದ್ದಾರೆಂದು ಸಹಸ್ರ ಗೋವುಗಳನ್ನು ಕೊಟ್ಟರೂ ಅವುಗಳನ್ನು ಇವರಿಗೆ ಕೊಡುತ್ತಿರಲಿಲ್ಲವೆಂದು ತಿಳಿದುಬರುತ್ತದೆ. ಅಂದರೆ ಆ ಕಾಲದಲ್ಲಿಯೇ ವಿಗ್ರಹಾರಾಧನೆ ತಕ್ಕಮಟ್ಟಿಗೆ ಪ್ರಚುಲಿತವಾಗಿತ್ತೆನ್ನಬಹುದು.[8]

ಭಾರತೀಯ ಶಿಲ್ಪ ಇತಿಹಾಸಲ್ಲಿ ಮೌರ್ಯರ ಕಾಲವೊಂದು ನೂತನ ಅಧ್ಯಾಯವನ್ನು ಪ್ರಾರಂಭಿಸಿತು, ಅಶೋಕನ ಪೂರ್ವಕಾಲದಲ್ಲಿ ಕಟ್ಟಡ ಮತ್ತು ಶಿಲ್ಪರಚನೆ ಮಾಡಲು ಮರ ಮತ್ತು ಇಟ್ಟಿಗೆಯನ್ನು ಬಳಸುತ್ತಿದ್ದರು ಆದರೆ ಅಶೋಕನ ಅವಧಿಯಲ್ಲಿ ಶಿಲ್ಪಕೃತಿಗಳು ಮೌರ್ಯ ಕಲಾನೈಪುಣ್ಯತೆಯನ್ನು ಪ್ರದರ್ಶಿಸುವಂತಾಯಿತು. ಅಶೋಕಸ್ತಂಭಗಳು, ಸಾರನಾಥಸ್ತೂಪ ಲೋಹಮಹರ್ಷಿ ಗುಹೆ, ಮೌರ್ಯರರ ಸ್ತಂಭಗಳ ಮೇಲ್ಭಾಗದ ವೃಷಭ, ಆನೆ, ಸಿಂಹ, ಕುದುರೆಯ ಆಕೃತಿಗಳು ಶ್ರೇಷ್ಠವಾಗಿವೆ. ದೌಲಿಯ ಬಂಡೆಯ ಮೇಲೆರಿರುವ ಆನೆಯ ಉಬ್ಬು ಶಿಲ್ಪ, ಪಾಟ್ನಾ, ಬೆಸನಗರದ ಸಾರನಾಥಶಿಲ್ಪಗಳು, ಪ್ರಮುಖವಾಗಿವೆ. ನಂತರ ಮೌರ್ಯರ ಶಕ್ತಿ ಇಳಿಮುಖವಾದಂತೆ ಗಂಗರು, ಕುಶಾನರು, ಕಳಿಂಗರು, ಶಿಲ್ಪಕಲೆಗೆ ಆಶ್ರಯ ನೀಡಿದರೆ, ಗುಪ್ತರು ಸಹ ಮೂರ್ತಿಶಿಲ್ಪದಲ್ಲಿ ಅತ್ಯುತ್ತಮ ಸಾಧನೆ ಮಾಡಿದ್ದಾರೆ.

ಇವರ ಕಾಲದಲ್ಲಿ ಮೂರ್ತಿಗಳನ್ನು ಜೇಡಿಮಣ್ಣು, ಕಲ್ಲು, ಲೋಹಗಳನ್ನು ಬಳಸಿ ಶಿಲ್ಪಗಳನ್ನು ತಯಾರಿಸುತ್ತಿದ್ದರು. ಗಾಂಧಾರ ಕಲೆಯನ್ನು ಬಳಸಿಕೊಂಡು ಮೂರ್ತಿಗಳನ್ನು ಕೆತ್ತಿದರೆ, ಮಧುರಾ ಹಾಗೂ ಸಾರನಾಥ ಬುದ್ಧ ಶಿಲ್ಪಗಳು, ದೇವಗಡದ ದ್ವಾರಪಾಲಕರು, ನವನಾರಾಯಣ, ಅನಂತಶಾಹಿ, ವಿಷ್ಣು, ಗಜೇಂದ್ರ, ಏಕಲಿಂಗ ಇವರ ಶ್ರೇಷ್ಠ ಶಿಲ್ಪಗಳಾಗಿವೆ. ಶಾತವಾಹನರ ಕಾಲದಲ್ಲಿ ನಾನಾಘಟ, ನಾಸಿಕ, ಕಾರ್ಲೆ ಕನ್ಹೇರಿ ಮುಂತಾದ ಕಡೆಗಳಲ್ಲಿ ಗಾಂಧಾರ ಶೈಲಿಯ ಶಿಲ್ಪಗಳು, ಬ್ರಹ್ಮ ಸೂರ್ಯ, ವಿಷ್ಣು , ಶಿವ, ಮಹಿಷಾಸುರ ಮರ್ಧನಿಯರ ಶಿಲ್ಪಗಳು ವಿಕಾಸಗೊಂಡವು.[9]

ದಕ್ಷಿಣ ಭಾರತದ ಮಟ್ಟಿಗೆ ಹೇಳಬಹುದಾದರೆ ಶಾತವಾಹನರ ಕಾಲದಲ್ಲಿ ಶಿಲ್ಪಕಲೆ ವಿಶೇಷವಾಗಿ ಬೆಳೆಯಿತು. ಅನಂತರ ವಾರಟಕರ, ಪಲ್ಲವರು, ಶಿಲ್ಪ ಹಾಗೂ ಚಿತ್ರಕ್ಕೆ ಆದ್ಯತೆ ನೀಡಿದರು. ಮುಂದೆ ಶಿಲ್ಪಕಲೆಯಲ್ಲಿ ಕರ್ನಾಟಕ ವಹಿಸಿದ ಪಾತ್ರ ಬಹಳ ಮಹತ್ತರವಾಗಿದೆ - ಚಾಲುಕ್ಯರ, ಗಂಗರ, ರಾಷ್ಟ್ರಕೂಟರು, ಹೋಯ್ಸಳರು ಹಾಗೂ ವಿಜಯನಗರ ಸಾಮ್ರಾಜ್ಯಗಳು ಶಿಲ್ಪಕಲೆಗೆ ಹೆಚ್ಚು ಆದ್ಯತೆ ನೀಡಿದರು. ಗಂಗರ, ಗೋಮಟೇಶ್ವರ ವಿಗ್ರಹ ಪ್ರಮುಖವಾಗಿದೆ ಇವರ ಅವಧಿಯಲ್ಲಿ ಹೆಚ್ಚಾಗಿ ಶಿವಲಿಂಗ, ವಿಷ್ಣು, ಸೂರ್ಯ, ನಂದಿ, ಸುಪ್ತಮಾತ್ರಿಕೆಯರು, ಗಣಪತಿ, ದುರ್ಗಾ, ಮಹಿಷ ಮರ್ಧಿನಿ, ಪ್ರಮುಖವಾಗಿವೆ. ಬದಾಮಿ ಚಾಲುಕ್ಯರ ಶಿಲ್ಪಕಲೆಗಳು ಬದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಮುಂತಾದ ಪ್ರದೇಶಗಳಲ್ಲಿ ನಾಗರ, ದ್ರಾವಿಡ, ವೇಸರ ಶೈಲಿಯ ಶಿಲ್ಪಗಳು ಕಂಡು ಬರುತ್ತವೆ. ರಾಷ್ಟ್ರಕೂಟರ ಎಲಿಫಂಟಾ ವಿಜಯನಗರದ ಶಿಲ್ಪಗಳು, ಹೋಯ್ಸಳರ, ಬೇಲೂರ, ಹಳೇಬೀಡು, ಸೋಮನಾಥಪೂರ, ನಂಜನಗೂಡಿನ ಶಿಲ್ಪಗಳು ಜಗತ್ತ ಪ್ರಸಿದ್ಧಿ ಪಡೆದಿವೆ. ಕರ್ನಾಟಕ ಶಿಲ್ಪವನ್ನು ಐತಿಹಾಸಿಕವಾಗಿ ಅಭ್ಯಾಸದ ಅನುಕೂಲಕ್ಕಾಗಿ ಈ ಕೆಳಗಿನಂತೆ ಕೆಲವು ವಿಭಾಗಗಳನ್ನು ಮಾಡಬಹುದು. ೧) ಚಾಲುಕ್ಯ ಪೂರ್ವಯುಗ ೨) ಚಾಲುಕ್ಯಯುಗ ೩) ರಾಷ್ಟ್ರಕೂಟರಯುಗ, ೪) ಹೋಯ್ಸಳರ ಯುಗ ೫) ವಿಜಯನಗರ ಯುಗ, ಎಂದು ಸ್ಥೂಲವಾಗಿ ಹೇಳಬಹುದು. ಏಕೆಂದರೆ, ಶಿಲ್ಪಗಳ ಪಾರಿಭಾಷಿಕ ವಿವೇಚನೆಯೆಂತೆಯೇ ಈ ದೃಷ್ಟಿಯಿಂದಲೂ ವಿವರವಾದ ಅಧ್ಯಯನ ಅವಶ್ಯಕವಾಗಿದೆ.[10]

ಶಿಲ್ಪಕಲೆಯ ಸಂಪತ್ತು ಭಾರತದಲ್ಲಿ ಹೆಚ್ಚಿದಂತೆ ಅವುಗಳಲ್ಲಿ ವಿಪುಲವಾದ ವೈವಿಧ್ಯ ಕಂಡು ಬರುತ್ತದೆ. ಈ ವೈವಿಧ್ಯತೆಯ ಹಿಂದೆ ಶಾಸ್ತ್ರದ ತಳಹದಿ ಇರುತ್ತದೆ. ಪ್ರತಿಮೆಗಳ ನಿರ್ಮಾಣ ಕ್ರಮವನ್ನು ವಿಕಾಸದ ಹಾದಿಯಲ್ಲಿ ಶಾಸ್ತ್ರಗಳ ಹಿನ್ನಲೆ ಸಹಾಯಕವಾಗಿವೆ. ಶಿಲ್ಪಶಾಸ್ತ್ರಗಳು ವಿಗ್ರಹಗಳ ನಿರ್ಮಾಣ ಕ್ರಮವನ್ನು ವಿಧಿವತ್ತಾಗಿ ವರ್ಣಿಸಿವೆ, ಕೆಲವು ನಿಯಮಗಳನ್ನು ಹಾಕಿಕೊಟ್ಟವು. ಶಾಸ್ತ್ರ ರೀತಿಯಲ್ಲಿ ನಿರ್ಮಿಸಿದ ವಿಗ್ರಹಗಳಿಂದ ಅಭ್ಯುದಯ ಮತ್ತು ಮೋಕ್ಷವುಂಟಾಗುತ್ತದೆ ಎಂಬ ಶ್ರದ್ಧೆ ಶಿಲ್ಪಶಾಸ್ತ್ರಕ್ಕೆ ಬಹಳ ಮಹತ್ವ ಬರಲು ಕಾರಣವಾಯಿತು ಅದಕ್ಕೆ ಅನುಗುಣವಾಗಿ ಶಿಲ್ಪ ಶಾಸ್ತ್ರ ಬೆಳೆದು ಬಂದವು. ಪುರಾಣಗಳ ಆಗಮಗಳ ಶಿಲ್ಪದ ಬಗ್ಗೆ ವಿವರಣೆ ನೀಡಿವೆ.

ಮೂರ್ತಿಗಳಲ್ಲಿ ಪ್ರಧಾನವಾಗಿ ಎರಡು ಭೇದಗಳನ್ನು ಶಿಲ್ಪಶಾಸ್ತ್ರಗಳು ಮಾಡುತ್ತವೆ.

೧. ಧ್ರುವಬೇರ : ಅಂದರೆ ಗರ್ಭಗೃಹದಲ್ಲಿರುವ ಮೂಲ ವಿಗ್ರಹಗಳು.

೨. ಚಲಬೇರ : ಅಂದರೆ ಉತ್ತಮ ಮೂರ್ತಿಗಳು ಧ್ರುವಬೇರಗಳಲ್ಲಿ ಸ್ಥಾನಕ್ (ನಿಂತಿರುವ ವಿಗ್ರಹಗಳು) ಆಸನ (ಕುಳಿತಿರುವ ವಿಗ್ರಹಗಳು) ಶಯನ (ಮಲಗಿರುವ ವಿಗ್ರಹಗಳು) ಎಂದು ಮೂರು ಬಗೆಗಳುಂಟು ಚಲಬೇರ : ಪ್ರತಿಮೆಗಳು ಲೋಹದಿಂದ ಮಾಡಲ್ಪಟ್ಟಿರುತ್ತವೆ. ಇವುಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು. ಆದುದರಿಂದಲೇ ಇವುಗಳನ್ನು ಉತ್ತಮುಗಳಿಗೂ, ಸ್ನಾನಾದಿ ಪೂಜಾ ವಿಧಿಗೂ ಉಪಯೋಗಿಸುತ್ತಾರೆ. ಪ್ರತಿಮೆಗಳನ್ನು (೧) ಉಗ್ರ (೨) ಶಾನ್ತ - ಎಂಬೆರಡು ಬೇರೆ ವಿಧವಾಗಿ ವಿಂಗಡಿಸುವದುಂಟು, ಉಗ್ರಪ್ರತಿಮೆ ತೀಕ್ಷಣವಾದ ಮತ್ತು ಉದ್ದವಾದ ಉಗುರು, ಮತ್ತು ಕೋರೆದಾವಡಿಗಳಿಂದ ಕೂಡಿರುತ್ತವೆ. ಅವುಗಳು ಅನೇಕ ಕೈಗಳಿಂದಲೂ ದೊಡ್ಡದಾದ ಮತ್ತು ದುಂಡಾದ ನೇತ್ರಗಳಿಂದಲೂ ಕೂಡಿರುತ್ತದೆ. ಉದಾ : ವಿಶ್ವರೂಪ, ನರಸಿಂಹ, ಪರಶುರಾಮ, ಗಜಹ್‌ಮೂರ್ತಿಗಳು ಪ್ರಮುಖವಾಗಿವೆ - ಶಾನ್ತ ಪ್ರತಿಮೆ - ವಿ ಷ್ಣು ಮತ್ತು ಆ ದೇವತೆಗಳ ಅವತಾರಗಳು ಇದಕ್ಕೆ ಸಂಬಂಧಿಸಿವೆ [11]

ಈ ವಿಗ್ರಹಗಳ ನಿರ್ಮಾಣ ಪ್ರತಿಮಾಶಾಸ್ತ್ರದ ಆಧಾರದ ಮೇಲೆ ವಿಕಾಸಗೊಂಡವು ವಿಗ್ರಹಗಳ ಪ್ರಮಾಣ ನಿರ್ಣಯ ಶಿಲ್ಪಶಾಸ್ತ್ರದ ಇನ್ನೊಂದು ಪ್ರಮುಖವಾದ ಸಾಧನೆಯಾಗಿದೆ. ಮನುಷ್ಯನ ದೇಹ ಪ್ರಮಾಣವನ್ನು ಮೊದಲು ಈಜಿಪ್ಟನ್ನವರು ಅನಂತರ ಗ್ರೀಕರು ನಿರ್ಧರಿಸಿ ಶಿಲ್ಪಗಳ ಪ್ರಮಾಣವನ್ನು ನಿಖರಗೊಳಿಸಿದರೆ ಭಾರತೀಯರು ಗ್ರೀಕ್‌ರಿಂದ ಈ ಪ್ರಮಾಣವನ್ನು ತೆಗೆದುಕೊಂಡು ಶಿಲ್ಪಗಳನ್ನು ನಿರ್ಮಿಸಿದರು ಎಂದು ವೈಖಾನಸಾನಮದಲ್ಲಿ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವಾಗಿತ್ತು. ವೈಖಾನನಾಗಮ ಭಾರತೀಯ ಪ್ರತಿಮಾ ಶಾಸ್ತ್ರದ ಪ್ರಕಾರ ವಿಗ್ರಹಗಳ ಆರು ವಿಧವಾದ ಅಳತೆಗಳಿಂದ ಕೂಡಿವೆ ಅವುಗಳೆಂದರೆ

1) ಮಾನ - ಉದ್ದದ ಅಳತೆ

2) ಪ್ರಮಾಣ - ಅಗಲದ ಅಳತೆ

3) ಉನ್ಮಾನ - ದಪ್ಪದ ಅಳತೆ

4) ಪರಿಮಾಣ - ಸುತ್ತಳತೆ

5) ಉಪಮಾನ - ಅಂಗಗಳ ಮಧ್ಯ ಇರುವ ಅಂತರ

6) ಲಂಬಮಾನ - ಬ್ರಹ್ಮಸೂತ್ರದ ಅಳತೆ

ಇದರ ಪ್ರಕಾರ ತಾಲಮಾನವನ್ನು ನಿರ್ಧರಿಸಲಾಗುತ್ತದೆ. ತಾಲ ಎಂಬುದು ಶಿಲ್ಪಶಾಸ್ತ್ರದ ಪಾರಿಭಾಷಿಕ ಶಬ್ದ ಇದು ಹನ್ನೆರಡು ಅಂಗುಲಕ್ಕೆ ಸಮವಾದದು, ಏಕತಾಲ ದ್ವಿತಾಲ, ತ್ರಿತಾಲ, ಹೀಗೆ ದಶತಾಲದವರೆಗೂ ಮೂರ್ತಿಗಳನ್ನು ನಿರ್ಮಿಸಬಹುದು -ಇದರಲ್ಲಿ ಸಾಮಾನ್ಯವಾಗಿ ದಶತ್ತಾಲವೇ, ಹೆಚ್ಚು ಪ್ರಚಾರದಲ್ಲಿ ಅದರಲ್ಲಿ ಮತ್ತೇ ಮೂರುಭಾಗ ಕನಿಷ್ಠ ದಶತಾಲ, ಮಧ್ಯಮದಶತಾಲ, ಮತ್ತು ಉತ್ತಮ ದಶತಾಲ, ಸಪ್ತಮಾತೃಕೆಯರ ಮೂರ್ತಿಗಳನ್ನು ಕನಿಷ್ಠ ದಶತಾಲದಲ್ಲಿ - ಸರಸ್ವತಿ, ಲಕ್ಷ್ಮೀ, ಭೂದೇವಿ, ಇತ್ಯಾದಿ ಸ್ತ್ರೀದೇವತೆಗಳನ್ನು ಮಧ್ಯಮ ದಶತಾಲದಲ್ಲಿ ನಿರ್ಮಿಸಲಾಗುತ್ತದೆ. ತ್ರಿಮೂರ್ತಿ ಮೊದಲಾದ ದೇವತೆಗಳನ್ನು ಉತ್ತಮ ದಶತಾಲದಲ್ಲಿ ನಿರ್ಮಿಸಲಾಗುತ್ತದೆ ಉತ್ತಮ ದಶತಾಲದ ಪ್ರಕಾರ

ಪುರಷ ದೇವತೆಗಳನ್ನು ಅಂಗಗಳ ಪ್ರಮಾಣ ನಿರ್ಣಯಿಸಲ್ಪಟ್ಟಿವೆ ಉಷ್ಣೀಷದಿಂದ ಕೇಶ ರೇಖೆಯವರೆಗೆ ನಾಲ್ಕು ಅಂಗುಲ, ಅಲ್ಲಿಂದ ಅಕ್ಷಿಸೂತ್ರ ನಾಲ್ಕು ಅಂಗುಲ, ಅಕ್ಷಿಸೂತ್ರದಿಂದ ನಾಸಿಕಕಾಂತ ನಾಲ್ಕು ಅಂಗುಲ, ನಾಸಿಕಾಂತದಿಂದ ಚುಬುಕಾಂತದವರೆಗೆ ನಾಲ್ಕು ಅಂಗುಲ, ಕಂಠ ಮತ್ತು ಚುಬುಕ ಸೇರುವ ಸ್ಥಳದಲ್ಲಿ ನಾಲ್ಕು ಅಂಗುಲ, ಕಂಠ ನಾಲ್ಕು ಅಂಗುಲ, ಕಂಠದಿಂದ ಹಿಕ್ಕಸೂತ್ರಕ್ಕೆ ( ಭುಜಕ್ಕೆ) ನಾಲ್ಕು ಅಂಗುಲ, ಅಲ್ಲಿಂದ ಚೂಚುಕಕ್ಕೆ ಹದಿಮೂರು ಅಂಗುಲ, ಅಲ್ಲಿಂದ ನಾಬಿಗೆ ಹದಿಮೂರು ಅಂಗುಲ, ಅಲ್ಲಿಂದಕಟಿ ಹದಿಮೂರ ಅಂಗುಲ, ಕಟಿಯಿಂದ ಜಾನ 27 ಅಂಗುಲ, ಅಲ್ಲಿಂದ ಜಂಘೆ 27 ಅಂಗುಲ, ಜಂಘೆಯಿಂದ ಪದತಲ ನಾಲ್ಕು ಅಂಗುಲ - ಹೀಗೆ ಮೂರ್ತಿಶಿಲ್ಪ ನಿರ್ಮಾಣವಾಗಬೇಕಾದರೆ ಈ ಅಳತೆಗಳನ್ನು ಶಿಲ್ಪಶಾಸ್ತ್ರ ಪ್ರತಿಪಾದಿಸುತ್ತದೆ.[12]

ಭಾರತೀಯ ಮೂರ್ತಿಶಿಲ್ಪ ಉಗಮ ಹಾಗೂ ವಿಕಾಸವನ್ನು ಅವಲೋಕಿಸಿದಾಗ ಪ್ರತಿಮಾ ಎಂಬ ಪದಕ್ಕೆ ತುಲ್ಯತೆ, ಸಮಾನತೆ, ರೂಪ, ಪ್ರತಿಬಿಂಬ, ಎಂಬರ್ಥಗಳಿಂದ ಸಾಕಷ್ಟು ವಿಷಯಗಳ ಇದರ ಅಡಿಯಲ್ಲಿ ಅಧ್ಯಯನ ಮಾಡಲು ಸಾಧ್ಯವಾಯಿತು. ಈ ಮೂರ್ತಿಶಿಲ್ಪಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳಾದ ಶುಕ್ರನೀತಿಸಾರ ವಿಷ್ಣು ಧರ್ಮೋತ್ತರ, ಮಯಮತ, ಮಾನಸಾರ, ಬೃಹತ್ ಸಂಹಿತಾ, ಶಿಲ್ಪರತ್ನ, ಶಿಲ್ಪಸಂಗ್ರಹ, ಶಿಲ್ಪಸಾರ, ವೈಖಾನಸಾಗಮ, ಮುಂತಾದ ಗ್ರಂಥಗಳು ದೇಶದಲ್ಲಾದ ಪ್ರತಿಮೆಗಳ ಸೃಷ್ಠಿ ಹಾಗೂ ಪ್ರಮಾಣದ ಬಗ್ಗೆ ಉಲ್ಲೇಖಿಸಿವೆ.[13] ಅವುಗಳ ಆಧಾರದ ಮೇಲೆ ದೇಶಿಯ ಮೂರ್ತಿಶಿಲ್ಪಗಳ ಉಗಮ ಹಾಗೂ ವಿಕಾಸವನ್ನು ಅಧ್ಯಯನ ಮಾಡಲಾಗುತ್ತದೆ.

## :: ಅಡಿಟಿಪ್ಪಣಿ ::

೧) ಡಾ।। ತಿಪ್ಪೇರುದ್ರಸ್ವಾಮಿ ಎಚ್ -ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಮೈಸೂರು ೧೯೬೮ ಪು.ಸಂ- ೫೨೩

೨) ಪ್ರಭಾಕರ್ ಎಂ. ಎಸ್.-ದೇವಾಲಯವಾಸ್ತು - ಹಂಪಿ ೨೦೧೧ ಪು.ಸಂ- ೦೪

೩) ಚೂಡಾಮಣಿ ನಂದಗೋಪಾಲ -ಶಿಲೆ-ಕಲೆ -ಬೆಂಗಳೂರು -೨೦೦೭ ಪು.ಸಂ- ೧೫೨

೪) ಡಾ।। ತಿಪ್ಪೇರುದ್ರಸ್ವಾಮಿ ಎಚ್ -ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಮೈಸೂರು ೧೯೬೮ ಪು.ಸಂ- ೫೨೪

೫) ಚೂಡಾಮಣಿ ನಂದಗೋಪಾಲ -ಶಿಲೆ-ಕಲೆ -ಬೆಂಗಳೂರು - ೨೦೦೭ ಪು.ಸಂ- ೧೫೩

೬) ಡಾ।। ತಿಪ್ಪೇರುದ್ರಸ್ವಾಮಿ ಎಚ್ -ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಮೈಸೂರು ೧೬೮ ಪು.ಸಂ- ೬೨೫

೭) ವ್ಹಾಯ್. ಎಚ್. ಸಿ. ಹುನಗುಂದ ನಾಡಿನ ಹತ್ತೂರ ಶಿಲ್ಪಕಲೆ -ಧಾರವಾಡ ೧೯೯೮ ಪು.ಸಂ -೩೯

೮) ಡಾ।। ತಿಪ್ಪೇರುದ್ರಸ್ವಾಮಿ ಎಚ್ -ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಮೈಸೂರು ೧೯೬೮ ಪು.ಸಂ- ೬೨೫

೯) ವ್ಹಾಯ್. ಎಚ್. ಸಿ. ಹುನಗುಂದ ನಾಡಿನ ಹತ್ತೂರ ಶಿಲ್ಪಕಲೆ -ಧಾರವಾಡ ೧೯೯೮ ಪು.ಸಂ -೪೧

೧೦) ಡಾ।। ತಿಪ್ಪೇರುದ್ರಸ್ವಾಮಿ ಎಚ್ -ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಮೈಸೂರು ೧೯೬೮ ಪು.ಸಂ- ೬೨೯

೧೧) ಕೃಷ್ಣರಾಯ ಅ.ನ.(ಸಂ) ಭಾರತೀಯ ಸಂಸ್ಕೃತಿ ದರ್ಶನ ಬೆಂಗಳೂರು ೧೯೬೨ ಪು.ಸಂ - ೫೧೨-೫೧೩

೧೨) ಡಾ।। ತಿಪ್ಪೇರುದ್ರಸ್ವಾಮಿ ಎಚ್ -ಕರ್ನಾಟಕ ಸಂಸ್ಕೃತಿ ಸಮೀಕ್ಷೆ - ಮೈಸೂರು ೧೯೬೮ ಪು.ಸಂ- ೬೨೮

೧೩) ಕೃಷ್ಣರಾಯ ಅ.ನ.(ಸಂ) ಭಾರತೀಯ ಸಂಸ್ಕೃತಿ ದರ್ಶನ ಬೆಂಗಳೂರು ೧೯೬೨ ಪು.ಸಂ - ೫೧೧

# ಅಧ್ಯಾಯ - ನಾಲ್ಕು

## ಹುನಗುಂದ ಪ್ರದೇಶದ ಶಿಲ್ಪಗಳು ಮತ್ತು ದೇವಾಲಯಗಳ ವೈಶಿಷ್ಟ್ಯತೆಗಳು

"ದೇಶಸುತ್ತು ಕೋಶ ಓದು" ಎಂಬುದು ಒಂದು ಜನಪ್ರೀಯ ಗಾದೆಮಾತು. ಈ ಗಾದೆಯ ಮಾತಿನ ಅರ್ಥದ ಹಿನ್ನಲೆಯಲ್ಲಿ ಬಾಗಲಕೋಟ ಜಿಲ್ಲೆಯ ಹುನಗುಂದ ಪ್ರದೇಶದ ಶಿಲ್ಪಗಳ ಮತ್ತು ದೇವಾಲಯಗಳ ವೈಶಿಷ್ಟತೆಯನ್ನು ಗುರ್ತಿಸಬಹುದು. ಹುನಗುಂದ ಪ್ರದೇಶದ ಧಾರ್ಮಿಕ ಕ್ಷೇತ್ರಗಳು ಐತಿಹಾಸಿಕ ನೆಲೆಗಳ ನಿಸರ್ಗ ನಿರ್ಮಿತ ತಾಣಗಳು ಐತಿಹಾಸಿಕ ಸ್ಮಾರಕಗಳು ಅಂತರಾಷ್ಟ್ರೀಯ ಪ್ರವಾಸಿಗರನ್ನು ಸೆಳೆದಿದೆ. ಈಗಾಗಲೇ ವಿಶ್ವಮಟ್ಟದಲ್ಲಿ ಗುರ್ತಿಸಿಕೊಂಡಿರುವ ಬದಾಮಿ, ಪಟ್ಟದಕಲ್ಲು, ಐಹೋೞೆ, ಅರಿಸಿಬೀದಿ, ಕೂಡಲಸಂಗಮ, ಮಹಾಕೂಟ, ಶಿವಯೋಗ ಮಂದಿರ, ಸಿಡಿಲುಪಡೆ, ಕೃಷ್ಣರಾಯ ಅ.ನ.(ಸಂ) ಭಾರತೀಯ ಸಂಸ್ಕೃತಿ ದರ್ಶನ ಬೆಂಗಳೂರು ೧೯೬೨ ಸಿದ್ದನಕೊಳ್ಳ, ದಮ್ಮೂರದಿಡಿಗು, ಚಾಲುಕ್ಯರಿಂದಾಗಿ ಇತಿಹಾಸದ ಪುಟದಲ್ಲಿ ದಾಖಲಾದ ರೀತಿ ಅಭೂತಪೂರ್ವವಾದದ್ದು. ವಾಸ್ತುಶಿಲ್ಪ ಕಲೆಯ ತೊಟ್ಟಿಲು ಎಂದೇ ಖ್ಯಾತಿಯಾದ ಐಹೋೞೆ ಶಿಲ್ಪಕಲೆಯ ಪ್ರಯೋಗಶಾಲೆಯಾಗಿತ್ತು ಎಂಬುದು ಗಮನಾರ್ಹ ವಾಸ್ತುಶಿಲ್ಪ ಮತ್ತು ಮೂರ್ತಿಗಳು ಎರಡರಲ್ಲಿಯೂ ಅನೇಕ ಪ್ರಯೋಗಗಳನ್ನು ಮಾಡಿ ಜಗತ್ತಿಗೆ ಪರಿಚಯಿಸಿದ್ದ ಇದೇ ಐಹೋೞೆ, 5ನೇ ಶತಮಾನದಿಂದ 12ನೇ ಶರಮಾನದವರೆಗೆ ಇಲ್ಲಿ ನಡೆದ ದೇವಾಲಯಗಳ ನಿರ್ಮಾಣ ಹೊಸ ಶಿಲ್ಪಕಲಾ ಪರಂಪರೆಗೆ ದಾರಿಯಾಯಿತು, ಶಿಲ್ಪಕಲೆ ಶ್ರೀಮಂತಿಕೆಯಲ್ಲಿ ಅದ್ಬುತವಾಗಿ ಮೆರೆದ ಈ ಪ್ರದೇಶದ ಚಾಲ್ಯುಕರ ಆಡಳಿತಕ್ಕೆ ಒಳಪಟ್ಟು ಚಾಲ್ಯುಕ ರಾಜರ ಆಸ್ಥಾನದಲ್ಲಿ ಶಿಲ್ಪಗಳ ಕೈಯಲ್ಲಿ ಕಲ್ಲು ಸಹ ಮೇಣದಂತೆ ಕರಗಿಸಿ, ಅಪೂರ್ವ ಕಲಾ ಕೃತಿಗಳನ್ನು ನಿರ್ಮಾಣ ಮಾಡಿದರು[1]

ಭಾರತೀಯ ಶಿಲ್ಪದಲ್ಲಿ ಚಾಲ್ಯುಕಯುಗ ವಿಶೇಷ ಪ್ರಸಿದ್ಧಿಯನ್ನು ಪಡೆದಿದೆ, ಈ ಕಾಲದ ವಾಸ್ತುಗಳಲ್ಲಿ ದೇವಮಂದಿರಗಳಲ್ಲಿ ಹಿಂದು ಪುರಾಣಗಳ ಶಿವ, ವಿಷ್ಣು, ದುರ್ಗೆಯರ ವಿವಿಧ ಅವತಾರಗಳ ಪ್ರತಿಮೆ ಕಾಣುತ್ತೇವೆ. ಪಟ್ಟದಕಲ್ಲು, ಐಹೋೞೆ, ಅರಿಸಿಬೀದಿಗಳಲ್ಲಿ ಹೇರಳವಾಗಿ ಸಿಗುವ ಮರಳುಗಲ್ಲನ್ನು ಬಳಸಿ ಶಿಲ್ಪಗಳು ದೇವತೆಗಳ ಮೂರ್ತಿಗಳನ್ನು 10-15 ಅಡಿ ಉನ್ನತ ಪ್ರತಿಮೆಗಳನ್ನು ಕೆತ್ತಿದ್ದಾರೆ. ಐಹೋೞೆ ಒಂದೇ ಸ್ಥಳದಲ್ಲಿ 3 ರಿಂದ 4 ವಿಭಿನ್ನ ಶಿಲ್ಪಶೈಲಿಯಲ್ಲಿ ಮೂರ್ತಿ ಕೆತ್ತಿದ್ದಾರೆ. ಇಲ್ಲಿ ನಿಂತ, ಕುಳಿತ ವರಗಿದ ಮೂರ್ತಿಗಳನ್ನು ಸರಳವಾಗಿ ಅಲಂಕಾರವಿಲ್ಲದೆ ಕೆತ್ತಿದ್ದಾರೆ. ದೇಹಲಾಲಿತ್ಯ ಹಾಗೂ ಮುಖದ ಗಾಂಭಿರ್ಯ ಸೊಗಸಾಗಿವೆ[2] ಚಾಲುಕ್ಯರ ಆಡಳಿತಕ್ಕೆ ಒಳಪಟ್ಟ ಹುನಗುಂದ ಪ್ರದೇಶದ ಐಹೊಳೆ, ಪಟ್ಟದಕಲ್, ಮಹಾಕೂಟ, ಹಾಗೂ ರಾಜಧಾನಿ ಬದಾಮಿ ಮುಂತಾದ ಸ್ಥಳಗಳಲ್ಲಿ ಕಟ್ಟಿದ ದೇವಾಲಯಗಳು ಭಾರತೀಯ ವಾಸ್ತುಕಲೆಯ ಮೂಲ ಅಧ್ಯಯನಕ್ಕೆ ಇವು ಪ್ರಯೋಗಶಾಲೆ ಎನ್ನಬಹುದು. ಏಕೆಂದರೆ ಕ್ರಿ.ಶ.ಕದಲ್ಲಿ ಕಟ್ಟಿದ ಆರಂಭದ ದೇವಾಲಯುಗಳು ಉಳಿದಿಲ್ಲವಾದರೂ, ಕದಂಬರ ಕಾಲದಲ್ಲಿ ಕ್ರಿ.150 ರಲ್ಲಿ ದೇವಾಲಯಗಳ ರಚನೆ ಬಗ್ಗೆ ವಿವರಿಸುತ್ತದೆ. ಆದ್ದರಿಂದ ದೇವಾಲಯಗಳ ಉಗಮ ಹಾಗೂ ವಿಕಾಸ ವೈಶಿಷ್ಟತೆಯನ್ನು ತಿಳಿಯಲು ಐಹೊಳೆ, ಪಟ್ಟದಕಲ್, ಮಹಾಕೂಟಗಳಲ್ಲಿರುವ ದೇವಾಲಯಗಳನ್ನು ಪರಿಶೀಲಿಸಬೇಕು. ಮಹಾಕೂಟೇಶ್ವರ ದೇವಾಲಯ, ಬದಾಮಿ, ಭೂತನಾಥ, ಐಹೊಳೆ ಲಾಡಖಾನ, ಗೌಡರಗುಡಿ ಪ್ರಾರಂಭಿಕ ದೇವಾಲಯುಗಳೆಂದು ಗುರ್ತಿಸಲಾಗಿದೆ. ಇವು ದಾಕ್ಷಿಣಾತ್ಯ ಹಾಗೂ ಔತ್ತರೇಯ ಸಂಪ್ರದಾಯ ಪಟ್ಟದಕಲ್ಲು, ಮತ್ತು ಮಹಾಕೂಟದ ರಚನೆಯಲ್ಲಿ ಕಾಣಬಹುದು. ಆದ್ದರಿಂದ ಉತ್ತರದ ದೇವಾಲಯಗಳು ರಚನೆಗೊಂಡು ಖಚಿತ ಆಕಾರ ತಳೆದಿದ್ದು ಈ, ಭೂ ಪ್ರದೇಶದಲ್ಲಿ ಅದಕ್ಕಾಗಿ ಈ ಪ್ರದೇಶದ ದೇವಾಲಯಗಳ ಅಧ್ಯಯನ ಮಹತ್ವದ್ದೆನಿಸಿದೆ[3]

ಈ ಪ್ರದೇಶದಲ್ಲಿ ದೇವಾಲಯಗಳನ್ನು ನಿರ್ಮಿಸಲು ಪ್ರಮುಖ ಕಾರಣ ಧಾರ್ಮಿಕ ನಂಬಿಕೆ ಜೀವನದಲ್ಲಿ ಒಂದಾಧ್ಗರೂ ಗುಡಿಯನ್ನು ಕಟ್ಟಿಸಬೇಕು, ಇಲ್ಲದೆ ಕಟ್ಟಿಸಿದೆ ಗುಡಿಗಳಿಗೆ ದಾನವನ್ನಾದರೂ ಕೊಡಬೇಕು, ಎಂಬುದು ಆಗಿನವರ ಧಾರ್ಮಿಕ ಭಾವನೆಯಾಗಿತ್ತು - ಸಂಪತ್ತು ಶಾಶ್ವತವಲ್ಲ ಧರ್ಮವೇ ನಿಜವಾದ ಸಂಪತ್ತು ''ಒಡಲೊಡವೆ ಹೆಂಡಿರೆಂಬವರಿಗೆ ಮಾತ್ರ, ಪುರುಷರಿಗೆ ಪುಣ್ಯ ರೂಪವೇ ಒಡವೆ, ಸಿರಿನಿಟ್ಟೆಯಲ್ಲಿ ಧರ್ಮವೇ ಪರಮಧನಂ'' ಆದುದರಿಂದ ಲಾಭ ಲೋಭದಿಂದ ತನುಣ್ಣದೆ ಪೆರರ್ಗಿಕ್ಕದೆ ಮಡಗಿ ನೃತರಿಗೆತೆತ್ತು ಬರಿದಾಗಿ ಬೆಳ್ಮೊಗದಿಂದರುವುದಕ್ಕಿಂತ ದೇವಾಲಯ ನಿರ್ಮಾಣ ಮಾಡುವಂತಹ ಹಿತಧರ್ಮಕಾರ್ಯ ಮಾಡುವದೇ ಲೇಸೆನಿಸಿತ್ತು. ಇದಕ್ಕೆ ನಿದರ್ಶನವಾಗಿ ಹುನಗುಂದ ಪ್ರದೇಶದ ರಾಜ, ಅಧಿಕಾರಿ, ವರ್ತಕ, ಸೇವಕಿಯರು, ಸಾಮನ್ಯರೆನ್ನದೆ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಭಾಗಿಯಾಗಿದ್ದರು. ಇವರೆಲ್ಲರ ಪ್ರೇರಣೆಯಿಂದ ಈ ಪ್ರದೇಶದಲ್ಲಿ ನಾಗರ, ದ್ರಾವಿದ, ವೇಸರ, ಶೈಲಿಯ ದೇವಾಲಯಗಳು ಹಾಗೂ ಮೂರ್ತಿ ಶಿಲ್ಪಗಳು ರಚನೆಯಾದವು[4]

ಭಾರತದ ವಾಸ್ತುಶಿಲ ಇತಿಹಾಸದಲ್ಲಿ ಚಾಲುಕ್ಯರ ಕಾಲದ ವಾಸ್ತುಶಿಲ್ಪ ಪ್ರಮುಖ ಅಧ್ಯಾಯವಾಗಿದೆ. ದಕ್ಷಿಣ ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಚಾಲುಕ್ಯ ಅರಸರು ಗುಹಾಲಯಗಳನ್ನು ಕೊರೆಸುವುದರ ಜೊತೆಗೆ ಕಟ್ಟಡ ಶೈಲಿಯ ದೇವಾಲುಗಳ ನಿರ್ಮಾಣಕ್ಕೆ ಕಾರಣೀಭೂತರಾದರು. ಅಷ್ಟೇ ಅಲ್ಲ ಅದರ ದೇವಾಲಯಗಳಿಗೆ ಪಲ್ಲವ, ಪಾಂಡ್ಯ ಅರಸರಿಗೆ ಸ್ಫೂರ್ತಿ ನೀಡಿದರು. ದಕ್ಷಿಣ ಭಾರತದಲ್ಲಿ ಮೊಟ್ಟಮೊದಲಬಾರಿಗೆ ದ್ರಾವಿದ ಶೈಲಿಯ ದೇವಾಲಯಗಳನ್ನು ನಿರ್ಮಿಸಿದರು. ಕ್ರಿ.ಶ.530 ರಲ್ಲಿ ಸ್ಥಾಪಿತ ಬದಾಮಿ ಚಾಲುಕ್ಯರ ಸಾಮ್ರಾಜ್ಯ ಉತ್ತರದ ನರ್ಮದ ನದಿಯಿಂದ ದಕ್ಷಿಣದ ಕಾವೇರಿಯವರೆಗಿನ ಪ್ರದೇಶವು ಒಂದೇ ಸಾಮ್ರಾಜ್ಯಕ್ಕೆ ಒಳಪಟ್ಟು ಪ್ರದೇಶಗಳನ್ನು ಹುನಗುಂದ ಪ್ರದೇಶವು ಒಂದಾಗಿದೆ. ಚಾಲುಕ್ಯ ಅರಸರ ಪ್ರೋತ್ಸಾಹ, ಸೌಂದರ್ಯ, ಪ್ರಜ್ಞ ಮತ್ತು ಅವರು ಸ್ಥಪತಿಗಳಿಗೆ ಕೊಟ್ಟ ಪ್ರೋತ್ಸಾಹ ಇವುಗಳ ಫಲವಾಗಿ ವಾಸ್ತುಶೈಲಿಯ ಹಲವು ರೀತಿಯಲ್ಲಿ ವಿಕಾಸಗೊಂಡಿತು. ಪರಮತ ಸಹಿಷ್ಣತಾವಾದಿಗಳಾದ ಇವರು, ವೈದಿಕ, ಜೈನ, ಬಸದಿಗಳು, ಭೌದ್ಧ ಚೈತ್ಯಾಲಯಗಳು, ಕಟ್ಟಲ್ಪಟ್ಟಿರುವುದು ಗಮನಾರ್ಹ ಚಾಲುಕ್ಯ ಅರಸ ಅರಸಿ, ಪ್ರಜೆಗಳಿಂದ ಐಹೋಳೆ, ಪಟ್ಟದಕಲ್ಲು, ಮಹಾಕೂಟ ಶಿದ್ದನಕೊಳ್ಳ, ಕೂಡಲಸಂಗಮ, ಇಲಕಲ್, ಹುನಗುಂದ, ಹಿರೇಶಿಂಗನಗುತ್ತಿ, ಕರಡಿ, ಕಂದಗಲ್, ಸೂಳೇಭಾವಿ, ಅರಸಿಬೀದಿ, ತಾರಿವಾಳ, ಚಿತ್ತವಾಡಗಿ, ಮುಂತಾದ ಕಡೆಗಳಲ್ಲಿ ಚಾಲುಕ್ಯರ ಕಾಲದ ದೇವಾಲಯಗಳು ಸಾಕಷ್ಟುಸಂಖ್ಯೆಯಲ್ಲಿ ಕಾಣುತ್ತೇವೆ. ವಿಭಿನ್ನಶೈಲಿ ಹಾಗೂ ತಲವಿನ್ಯಾಸ ಹೊಂದಿದ ದೇವಾಲಯಗಳ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿವೆ[5] .

**ಐಹೊಳೆ :**

ಚಾಲುಕ್ಯರ ಸಂಸ್ಕೃತಿಕ ಕೇಂದ್ರವಾಗಿದ್ದ ಐಹೋಳೆಯಲ್ಲಿ ವಿಶೇಷ ಮಾದರಿಯ ದೇವಾಲಯಗಳ ನಿರ್ಮಾಣವಾದವು. ಅವುಗಳೆಂದರೆ- ಸಾಂಧಾರಮಾದರಿಯ ದೇವಾಲಯಗಳು-ಮೇಗೂತಿ, ಹುಚ್ಚಮಲ್ಲಿಗುಡಿ, ಗೌಡರಗುಡಿ, ದುರ್ಗಾಗುಡಿ, ನಿರಂಧಾರ ಮಾದರಿ ದೇವಾಲಯಗಳ- ಹುಚ್ಚಪ್ಪಯನಗುಡಿ, ಕೊಂತಗುಡಿ , ತಾರಪ್ಪಗುಡಿ, ಚಕ್ರಗುಡಿ, ಮಲ್ಲಿಕಾರ್ಜುನಗುಡಿ, ದ್ರಾವಿಡ ಮಾದರಿ ಶಿಖರ- ಐಹೋಳೆ ರಾವಣಫಡಿ ಹತ್ತಿರದ ಚಿಕ್ಕದೇಗುಲ, ರೇಖಾನಾಗರಿಶಿಖರ- ಹುಚ್ಚಮಲ್ಲಿಗುಡಿ, ದುರ್ಗಾ, ಸೂರ್ಯ, ತಾರಪ್ಪಗುಡಿ, ಚಕ್ರಗುಡಿಗಳ ಈ ಶೈಲಿ ಹೊಂದಿವೆ. ಮಲ್ಲಿಕಾರ್ಜುನ,ಗಳಗನಾಥ-ಕದಂಬ ನಾಗರ ಶೈಲಿಯ ಶಿಖರ ಹೊಂದಿವೆ.

ಐಹೋಳೆಯ ಎಲ್ಲಾ ಚಾಲುಕ್ಯ ದೇವಾಲಯಗಳು ಏಕಕೂಟಗಳಾಗಿದ್ದರೂ ಇಲ್ಲಿಯ ಸ್ಥಾಪತಿಗಳು ಈ ದೇವಾಲಯ ನಿರ್ಮಾಣ ಮಾಡುವಾಗ ವಿಭಿನ್ನ ರೀತಿಯ ತಲವಿನ್ಯಾಸ ಗರ್ಭಗೃಹ, ಮುಖಮಂಪಟ ಪ್ರದಕ್ಷಿಣಪಥ, ಅಂತರಾಳ, ಅರ್ಧಮಂಟಪ, ಸಭಾಗೃಹ, ಗಜಪೃಷ್ಠಾಕಾರದ ತಲವಿನ್ಯಾಸ ಇವು ಚಾಲುಕ್ಯರ ವೈಶಿಷ್ಟಗಳಾಗಿವೆ'

**ಲಾಡಖಾನ ದೇವಾಲಯ :**

ಇದು ಐಹೋಳೆಯ ಪ್ರಾಚೀನವಾದ ದೇವಾಲಯಗಳಲ್ಲೊಂದು. ಪೂರ್ವಕ್ಕಿರುವ ಈ ದೇವಾಲಯ ಮುಂಭಾಗದಲ್ಲಿ ಮುಖಮಂಟಪವಿದೆ. ಮುಭಾಗದ ಅಕ್ಕ ಪಕ್ಕದ ಗೋಡೆಗಳಲ್ಲಿ ಮಧ್ಯ ಮಧ್ಯೆ ಕಿಂಡಿಗಳನ್ನುಳ್ಳ ಚೌಕಟ್ಟಗಳಿವೆ. ಗರ್ಭಗೃಹ ಹೊಂದಿದೆ. ಕಂಬಗಳ ಸಾಲುಗಳ ಮಧ್ಯದಲ್ಲಿ ರಂಗಮಂಟಪವಿದೆ. ಇದೊಂದು ಶೈವದೇವಾಲಯವಾಗಿದೆ ಇಲ್ಲಿ ಒಬ್ಬ ಮುಸ್ಲಿಂ ಸಾದು ಇದ್ದುದರಿಂದ ಈ ಅದಕ್ಕೆ ಲಾಡಖಾನ ಎಂದು ಹೆಸರು ಬಂದಿತು.

**ಕೊಂತಿಗುಡಿ :**

ಈ ದೇವಾಲಯ ಲಾಡಖಾನ ಮಾದರಿಯಾಗಿದೆ. ಆಕಾರದಲ್ಲಿ ಅದಕ್ಕಿಂತ ಚಿಕ್ಕದು, ಕಂಬಗಳ ರಚನೆ ಹಾಗೂ ಕೆತ್ತನೆಯ ದೃಷ್ಟಿಯಿಂದ ಅದಕ್ಕಿಂದ ಪರಿಷ್ಕೃತರೂಪವನ್ನು ಪಡೆದಿದೆ. ಮಟ್ಟಸವಾದ ಮೇಲ್ಛಾವಣಿಯ ಮಧ್ಯಭಾಗದಲ್ಲಿ ಒಂದು ಶಿಖರವಿದೆ. ರಂಗಮಂಟಪದಲ್ಲಿ ನಾಲ್ಕು ಸ್ತಂಭಗಳಿವೆ. ಮುಖಮಂಟಪ, ರಂಗಮಂಟಪ, ಗರ್ಭಗೃಹ ಹೊಂದಿದೆ.

**ದುರ್ಗಾದೇವಾಲಯ :**

ಐಹೋಳೆಯ ಎಲ್ಲ ದೇವಾಲಯಗಳಿಗಿಂತ ಇದೊಂದು ವಿಶೇಷ ದೇಗುಲವಾಗಿದೆ. ಔತ್ತರೇಯ ರೀತಿಯ ಶಿಖರವನ್ನು ಹೊಂದಿದೆ. ಬೃಹದ್ವ್ಯಾಸದ ಚೈತ್ಯಾಗುಹಾಲಯಗಳ ಮಾದರಿಯಲ್ಲಿ ನಿರ್ಮಿತವಾಗಿರುವ ರಚನೆ ಅಪೂರ್ವವಾಗಿದೆ. ರಂಗಮಂಟಪ, ಎರಡುಸಾಲಸ್ತಂಭ, ಗರ್ಭಗೃಹ,ಪ್ರದಕ್ಷಿಣಪಥ ಹೊಂದಿದೆ. ಪೂರ್ವಾಭಿಮುಖ ವಾಗಿರುವ ಈ ದೇವಾಲಯ ಶೈವ ಹಾಗೂ ವೈಷ್ಣವ ಸಮನ್ವಯವನ್ನು ತೋರಿಸುತ್ತದೆ. ನರಸಿಂಹ ವರಹ, ಮಹಿಷಾಸುರ ಮರ್ದಿನಿ, ಅರ್ಧನಾರೀಶ್ವರ ಶಿಲ್ಪಗಳಿವೆ.

**ಹುಚ್ಚಮಲ್ಲಿ ಗುಡಿ :**

ಐಹೋಳೆ ಪ್ರಾಚೀನ ದೇವಾಲಯಗಳಲ್ಲಿ ಇದು ಇಂದು. ದೇವಾಲಯದ ಮುಖ್ಯಭಾಗವಾದ ರಂಗಮಂಟಪ ಹಾಗೂ ಗರ್ಭಗೃಹ ಹೊಂದಿದೆ. ಸರಳವಾದ ರಚನೆ ಹಾಗೂ ಆಕಾರದಲ್ಲಿ ದುರ್ಗಾ ದೇವಾಲಯಕ್ಕಿಂತ ಚಿಕ್ಕದು, ಶಿಲ್ಪಕೃತಿಗಳು ಕಂಡು ಬರುವದಿಲ್ಲ ಔತ್ತರೇಯ ಶಿಖರವನ್ನು ಹೊಂದಿದೆ, ಮುಖಮಂಟಪ, ನವರಂಗ, ಮಧ್ಯಮಂಟಪ, ಸಂಕನಾಶಿ, ಗರ್ಭಗೃಹ, ಇಕ್ಕೆಲದ ಹಜಾರಗಳು, ಪ್ರದಕ್ಷಿಣಪಥ ಹೊಂದಿದೆ.

**ಮೇಗುತಿ ದೇವಾಲಯ :**

ಐಹೋಳೆ ಗುಡ್ಡದಲ್ಲಿ ಒಂದು ಚಿಕ್ಕ ಗುಡ್ಡವಿದೆ. ಅದರ ಮೇಲೆ ಈ ದೇವಾಲಯವಿದೆ. 2ನೇ ಪುಲಕೇಶಿ ದಂಡನಾಯಕ ರವಿಕೀರ್ತಿ ಕಟ್ಟಿಸಿದ ಜೈನ ದೇವಾಲಯ, ಈ ದೇವಾಲಯದ ಪೂರ್ವಗೋಡೆಯ ಮೇಲೆ ಪುಲಕೇಶಿಯ ಸೈನಿಕ ಸಾಧನೆ ಶಾಸನವಿದೆ. ದ್ರಾವಿದ ಶೈಲಿಯಲ್ಲಿ ನಿರ್ಮಿತವಾದ ಆರು ಸ್ತಂಭಗಳು ಇವೆ. ಇದು ದ್ರಾವಿಡ ಶೈಲಿಯ ದೇವಾಲಯವಾಗಿದೆ. ಮುಖಮಂಟಪ, ರಂಗಮಂಟಪ, ಗರ್ಭಗೃಹ, ಪ್ರದಕ್ಷಣಪಥ ಹೊಂದಿದೆ.

**ರಾಮಲಿಂಗ ದೇವಾಲಯ :**

ಮಲಪ್ರಭಾ ನದಿಯ ದಂಡೆಯ ಮೇಲಿದೆ. 3 ಗರ್ಭಗೃಹ ಹೊಂದಿದೆ ದೇವಾಲಯದ ಮಧ್ಯದಲ್ಲಿ ದೊಡ್ಡ ಮಂಟಪವಿದೆ. ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾಗಿದೆ. ಇದೊಂದು ತ್ರಿಕೂಟ ಆಕಾರದ ದೇವಾಲಯವಾಗಿದೆ. ಈ ದೇವಾಲಯ ಪ್ರವೇಶ ದ್ವಾರ, ದೊಡ್ಡ ಮಂಟಪ, ನಂದಿವಿಗ್ರಹ, ಸುಕನಾಸಿ, ಮುಖ್ಯಗರ್ಭಗೃಹ, ಎರಡನೇ ಗರ್ಭಗೃಹ, ಮೂರನೇ ಗರ್ಭಗೃಹ, ಹೊಂದಿದ ಇದೊಂದು ವಿಶೇಷವಾದ ದೇವಾಲಯವಾಗಿದೆ [7].

**ಅರಸಿಬೀದಿ :**

ಹುನಗುಂದದಿಂದ 16 ಕಿ.ಮೀ ದೂರದಲ್ಲಿದೆ. ಇದಕ್ಕೆ ವಿಕ್ರಮಪೂರವೆಂಬ ಹೆಸರಿತ್ತೆಂದು, ಇದನ್ನು 6ನೇ ವಿಕ್ರಮಾದಿತ್ಯನ ಚಿಕ್ಕಮ ಅಕ್ಕದೇವಿಯು ಆತನಗೌರವಾರ್ಥವಾಗಿ ಕಟ್ಟಿಸಿದಳು, ಈ ದೇವಾಲಯ ಚಾಲುಕ್ಯ ದೇವಾಲಯವಾಗಿದೆ ಎರಡು ಶಾಸನಗಳು ಇವೆ ಇಲ್ಲಿ ಎರಡು ಜೈನ ಬಸದಿಗಳು ಇರುತ್ತವೆ.

**ಸಿದ್ಧನಕೊಳ್ಳ :**

ಚಾಲುಕ್ಯರ ಕಾಲದ ಶಿಲ್ಪಕಲೆ ಗುರ್ತಿಸಲು, ಇದೊಂದು ಪ್ರಮುಖ ದೇವಾಲಯವಾಗಿದೆ. ಐಹೋಳೆ - ಬದಾಮಿ ರಸ್ತೆಯಲ್ಲಿ ಸಿಗುವ ಈ ದೇವಾಲಯ ಕಲ್ಯಾಣಮಂಟಪ, ಹಾಗೂ ಶ್ರೀಕನ್ನಿಕಾ ಪರಮೇಶ್ವರಿ ದೇವಾಲಯಗಳು ಇವೆ.

**ದಮ್ಮೂರ :**

ಹುನಗುಂದದಿಂದ 15 ಕಿ.ಮೀ ದೂರದಲ್ಲಿದೆ. ಇದನ್ನು ದಿಡಗಧಮ್ಮೂರ ಎಂದು ಕರೆಯುತ್ತಾರೆ. ನೈಸರ್ಗಿಕವಾಗಿ ಕಲ್ಲುಗಳ ಮಧ್ಯದಿಂದ ನೀರು ಬೀಳುವುದು. ಇಲ್ಲಿ ಬಸವೇಶ್ವರ ದೇವಸ್ಥಾನವಿರುತ್ತದೆ [8].

**ಕೂಡಲಸಂಗಮ :**

ಇದು ಹುನಗುಂದದಿಂದ 2.5 ಕಿ.ಮೀ. ದೂರದಲ್ಲಿದ್ದು, ಮಲಪ್ರಭಾ ಮತ್ತು ಕೃಷ್ಣಾ ನದಿಗಳ ಸಂಗಮದಲ್ಲಿದೆ. ಸಂಗಮೇಶ್ವರ ದೇವಾಲಯವನ್ನು ಕಲ್ಯಾಣಿ ಕಲಚೂರಿಗಳು ನಿರ್ಮಿಸಿದರು ಎಂದು ಇಲ್ಲಿಯ ಶಾಸನ ಉಲ್ಲೇಖಿಸಿದೆ. ದೇವಾಲಯದ ಹೊರಮೈ ಕೆಂಪು ಮಿಶ್ರಿತ ಮರಳುಗಲ್ಲಿನಿಂದ ನಿರ್ಮಿಸಲಾಗಿದೆ ಗರ್ಭಗೃಹ, ಸಭಾಮಂಟಪ, ಇರುತ್ತದೆ. ಇಲ್ಲಿ ಬಸವಣ್ಣನವರ ಐಕ್ಯ ಮಂಟಪವಿದೆ.

**ಕರಡಿ :**

ಹುನಗುಂದದಿಂದ 20 ಕಿ.ಮೀ. ದೂರದಲ್ಲಿದ್ದು, ಇಲ್ಲಿ ಚಾಲುಕ್ಯರ ಕಾಲದ ಶೈವ ದೇವಾಲಯಗಳಿವೆ. ಬಸವೇಶ್ವರ ದೇವಾಲಯ, ನೆಲಗುಡಿ ಸಂಗಮೇಶ್ವರ, ಜೈನಬಸದಿ, ಹಾಗೂ ಎರಡುಶಾಸನಗಳಿವೆ. ಗರ್ಭಗೃಹ ಹಾಗೂ ಸಭಾಮಂಟಪ, ದ್ವೀಪಸ್ತಂಭ ಇರುತ್ತದೆ.

**ನಂದವಾಡಗಿ :**

ಹುನಗುಂದದಿಂದ 25 ಕಿ.ಮೀ ದೂರದಲ್ಲಿದ್ದು, ಇಲ್ಲಿ ಚಾಲುಕ್ಯರ ಸಮಕಾಲಿನಲ್ಲಿ ನಿರ್ಮಿಸಿದ ಈಶ್ವರ ದೇವಾಲಯ , ಸಂಗಮೇಶ್ವರ ದೇವಾಲಯ, ಮಲ್ಲಯ್ಯ ದೇವಾಲಯಗಳಿವೆ. ಹಾಗೂ ಇವೆಲ್ಲವು ಗರ್ಭಗೃಹ, ಪ್ರದಕ್ಷಿಣಪಥ,ಸಭಾಮಂಟಪ ಹೊಂದಿವೆ. ಇಲ್ಲಿ ಒಂದು ಸ್ತಂಭದ ಮೇಲೆ ಶಾಸನವಿದೆ.

**ಕಂದಗಲ್ :**

ಈ ಪ್ರದೇಶದ ಇನ್ನೊಂದು ಪ್ರಮುಖ ಸ್ಥಳವೆಂದರೆ, ಕಂದಗಲ್ಲ ಇಲ್ಲಿ ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ನಿರ್ಮಾಣವಾದವಮೂರು ಪ್ರಾಚೀನ ದೇವಾಲಯುಗಳಿವೆ. ವೀರಭದ್ರೇಶ್ವರ ದೇವಾಲಯ, ಸ್ವಾಮಿಶಂಕರಲಿಂಗ, ರಾಮಲಿಂಗದೇವಾಲಯ, ಈಶ್ವರ ದೇವಾಲಯ, ಹಾಗೂ ಇವು ಗರ್ಭಗೃಹ ಸಭಾಮಂಟಪ ಹೊಂದಿವೆ. ಹನಮಂತ ದೇವಾಲಯ ಆವರಣದಲ್ಲಿ 7 ಶಾಸನಗಳು ಇವೆ.

**ಇಲಕಲ್ :**

ಹುನಗುಂದದಿಂದ ಹನ್ನೆರಡು ಕಿ.ಮೀ. ದೂರದಲ್ಲಿದ್ದು, ಚಾಲುಕ್ಯರ ಅವಧಿಯಲ್ಲಿ ನಿರ್ಮಾಣವಾದ ವೆಂಕೋಬ, ಮಲ್ಲಿಕಾರ್ಜುನ, ಬನಶಂಕರಿ, ದೇವಾಲಯಗಳಿವೆ. ವೆಂಕೋಬ ದೇವಾಲಯ ಗೊಂಬಿಗುಡಿ ಎಂದು ಪ್ರಸಿದ್ಧಿ ಪಡೆದಿದೆ.

**ಹಿರೇಶಿಂಗನಗುತ್ತಿ :**

ಇಲ್ಲಿ ರಾಷ್ಟ್ರಕೂಟರ ಅವಧಿಯಲ್ಲಿ ನಿರ್ಮಾಣವಾದ 3 ದೇವಾಲಯಗಳು ಒಂದೇ ಆವರಣದಲ್ಲಿವೆ. ಇವು ದಕ್ಷಿಣಾಭಿಮುಖವಾಗಿವೆ, ಮಾರುತಿ ದೇವಾಲಯ, ಈಶ್ವರ ದೇವಾಲಯ, ಗೌರಮ್ಮ ದೇವಾಲಯ, ಹಾಗೂ ಮಲ್ಲಿಕಾರ್ಜುನ ದೇವಾಲಯವಿದೆ. ನಾಗನಗೌಡರ ಮನೆಯ ಮುಂದೆ ಒಂದು ಶಾಸನವಿದೆ.[9]

**ಹುನಗುಂದ ಪ್ರದೇಶದ ಮೂರ್ತಿಗಳು :**

ಹುಗುಂದ ಪ್ರದೇಶವು ಕ್ರಿ.ಪೂ. ಕಾಲದಿಂದ ಇವತ್ತಿನವರೆಗೂ ಉಳಿಸಿ ಬೆಳೆಸಿಕೊಂಡ ಬಂದ ಪ್ರಾಚೀನ ಧರ್ಮಗಳಾದ ಜೈನಧರ್ಮ, ಬೌದ್ಧಧರ್ಮ, ಶೈವಧರ್ಮ, ವೈಷ್ಣವ ಧರ್ಮ ಇವು ಈ ಪ್ರದೇಶದಲ್ಲಿದ್ದವು ಎಂಬುದಕ್ಕೆ ಜೀವಂತ ಸಾಕ್ಷಿಗಳ. ಬಸದಿ, ಚೈತ್ಯಾಲಯಗಳು, ದೇವಾಲಯಗಳು, ಇವುಗಳ ಆಧಾರದ ಮೇಲೆ ಈ ಪ್ರದೇಶದಲ್ಲಿದ್ದ ದೀರ್ಘಕಾಲ ಐತಿಹಾಸಿಕ ಪರಂಪರೆಯನ್ನು ಹೊತ್ತ ನಿಂತಿರುವ ಮೂರ್ತಿ ಶಿಲ್ಪಗಳು ವೀರಗಲ್ಲು, ಮಹಾಸತಿಗಲ್ಲು, ನಿಷದಿಗಲ್ಲು, ಮಾಸ್ತಿಗಲ್ಲು, ಇಲ್ಲಿ ಹೇರಳವಾಗಿ ದೊರೆಯುತ್ತವೆ. ಇಲ್ಲಿ ದೊರೆತ್ತಿರುವ ಶಿಲ್ಪಗಳನ್ನೆಲ್ಲ ಒಂದೇ ದೃಷ್ಟಿಯಿಂದ ನೋಡದೆ ಅವುಗಳನ್ನು ವಿಂಗಡಿಸಿ ಕಾಲಮಾನದ ಆಧಾರದ ಮೇಲೆ ಗುರ್ತಿಸಬಹುದು. ಜೈನಮೂರ್ತಿಗಳು, ಶೈವಮೂರ್ತಿಗಳು, ವೈಷ್ಣವಮೂರ್ತಿಗಳು, ಚೈತ್ಯಾಲಯಗಳು, ಗಣಪತಿ ಮೂರ್ತಿಗಳು, ಶಕ್ತಿಮೂರ್ತಿಗಳು, ಇಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದು.

ಕರ್ನಾಟಕದಲ್ಲಿ ಶಿಲ್ಪಗಳ ಪೈರು ಅತ್ಯಂತ ಸಮೃದ್ಧವಾಗಿ ಬೆಳೆದು ಬಂದಿದ್ದು, ಚಾಲುಕ್ಯರ ಕಲದಲ್ಲಿ ಕ್ರಿ.ಶ. 6,7,9 ನೇಯ ಶತಮಾನದಲ್ಲಿ ಬದಾಮಿ ಚಾಲುಕ್ಯರ ಆಡಳಿತ ಅವಧಿಯಲ್ಲಿ ಹುನಗುಂದ ಪ್ರದೇಶದ ಐಹೊಳೆ, ಅರಿಸಿಬೀದಿ, ಗೂಡೂರ, ಇಲಕಲ್, ಕೂಡಲಸಂಗಮ, ಹುನಗುಂದ, ನಂದವಾಡಗಿ, ಕಂದಗಲ್, ಹೀರೇಶಿಂಗಿನಗುತ್ತಿ, ತಾರಿವಾಳ, ಚಿತ್ತವಾಡಗಿ, ತೂರಮರಿ, ಸೋಮಲಾಪೂರ, ಮುಂತಾದ ಪ್ರದೇಶಗಳಲ್ಲಿ ಐಹೊಳೆ, ಬದಾಮಿ, ಪಟ್ಟದಕಲ್, ಎಂಬ ತ್ರಿಪದಿಯ ಮೇಲೆ ಹದವಾದ ಶಿಲ್ಪಕಲೆ ಈ ಪ್ರದೇಶದಲ್ಲಿ ಸಿದ್ಧಗೊಳಿದವರು ಚಾಲುಕ್ಯ ರೂವಾರಿಗಳು.

ಹುನಗುಂದ ಪ್ರದೇಶದಲ್ಲಿ ಮರಳಶಿಲೆ ಸಾಕಷ್ಟು ಲಭ್ಯವಿದೆ. ಈ ಶಿಲೆಯಲ್ಲಿ ಚಾಲುಕ್ಯರ ಗುಹಾಲಯಗಳು ರಾಜನಿಕ ಮಂದಿರಗಳು ರೂಪಗೊಂಡವು. ಮೂರ್ತಿಗಳ ನಿರ್ಮಾಣಕ್ಕೆ ಪಳಪದಕಲ್ಲಿನಂತೆ ಮೃದುವಾಗಿರುವ ಈ ಶಿಲೆ ಅನುಕೂಲವಾಯಿತು. ಇಲಕಲ್ ಗ್ರಾನೈಟ್ ಕಲ್ಲಿನಂತೆ ಕಠಿಣವಾದುದು ಅಲ್ಲಿ ಪೆಡಸಾದ ಕಲ್ಲು ಅಲ್ಲ. ಇಲ್ಲಿ ಮರಳಗಲ್ಲಿನ ನಸುಗೆಂಪು ಅಥವಾ ತಿಳಿಕಂದು ಬಣ್ಣವು ಶಿಲ್ಪಕ್ಕೆ ಹೆಚ್ಚಿನ ಚೆಲುವನ್ನು ನೀಡುವಂತಹದ್ದು.

ಈ ಪ್ರದೇಶದ ಕಲ್ಲು ಸಹಜವಾಗಿಯೇ ಶಿಲ್ಪಗಳಿಗೆ ಪ್ರೇರಣೆ ಮಾಡಿಸಿರಬೇಕು. ಅವರ ಅಂತ ಸ್ಫೂರ್ತಿಯನ್ನು ಸೋಪಜ್ಞತೆಯನ್ನು ಜಾಗೃತಗೊಳಿಸಿರಬೇಕು. ಇದರಿಂದಾಗಿ ಚಾಲುಕ್ಯ ಸ್ಥಾಪತಿಗಳು ನೂರಾರು ದೇವಾಲಯಗಳನ್ನು ನಿರ್ಮಿಸಿದರು. ಶಿಲ್ಪಗಳು ಅವುಗಳ ಗೋಡೆ, ಸ್ತಂಭ, ಬೋದಿಗೆ, ಜಗತಿ, ದ್ವಾರಬಾಗಿಲು, ಪ್ರಸ್ತಕದಭಾಗ, ತೋರಣ, ಜಂಘಭಾಗ, ಕಂಟಕಪೀಠ, ಮಕರ ಮುಖಾಲಂಕರಗಳನ್ನು ಶಿಲ್ಪಗಳಿಂದ ಸಿಂಗರಿಸಿದರು.[10]

ಗುಹಾ ವಾಸ್ತು ಪರಂಪರೆ ಬದಾಮಿಯಲ್ಲಿ ಇನ್ನೂ ರೂಢವಾಗಿದ್ದಾಗಲೇ ಚಾಲುಕ್ಯರ ರಾಜನಿಕ ದೇಗುಲಗಳ ನಿರ್ಮಾಣಕ್ಕೆ ಹುಟ್ಟು ಹಾಕಿದರು. ಅನೇಕ ಸಂಖ್ಯೆಯಲ್ಲಿ ಚಾಲುಕ್ಯ ಆಡಳಿತ ಪ್ರದೇಶಗಳಲ್ಲಿ ಬದಾಮಿ, ಮಹಾಕೂಟ, ಐಹೋಳೆ, ಪಟ್ಟದಕಲ್ಲು, ನಂದವಾಡಗಿ, ಹಿರೇಶಿಂಗನಗುತ್ತಿ, ಗೂಡೂರ, ಅರಿಸಿಬೀದಿ, ಕಂದಗಲ್ಲ ಮುಂತಾದ ಸ್ಥಳಗಳಲ್ಲಿ ರಾಜನಿಕ ಶಿಲಾ ದೇಗುಲಗಳು ನಿರ್ಮಾಣಗೊಂಡವು. ಅಂಥವುಗಳಲ್ಲಿ ಹಲವಾರು ದೇಗುಲ ಶಿಲ್ಪಗಳಿಂದ ಸಿಂಗರಿಸಲ್ಪಟ್ಟಿವೆ. ಇವೆಲ್ಲವುಗಳನ್ನು ಶೈಲಿ ಹಾಗೂ ಪ್ರತಿಮಾ ಲಕ್ಷಣಗಳು ಆಧಾರದ ಮೇಲೆ ಇವುಗಳ ವೈವಿಧ್ಯಗಳನ್ನು ಗಮನಿಸಬಹುದು. ಎಲ್ಲ ದೇಗುಲಗಳ ಶಿಲ್ಪಗಳನ್ನು ಪರೀಕ್ಷೆಗೊಳಪಡಿಸುವುದು ಇಲ್ಲಿ ಸಾಧ್ಯವೂ ಇಲ್ಲ; ಅವಶ್ಯವೂ ಅಲ್ಲ, ಯಾಕೆಂದರೆ ಅಂಥ ಪ್ರಯತ್ನ ಹೇಳಿದ ವಿಷಯಗಳನ್ನು ಮತ್ತೊಮ್ಮೆ ಹೇಳುವ ಸ್ಥಿತಿಗೆ ಎಡೆಮಾಡಿಕೊಡಬಹುದು. ನಾವಿಲ್ಲ ಶೈಲಿ, ಪ್ರತಿಮಾ ಲಕ್ಷಣ, ಕಾಲಾನುಕ್ರಮ, ಇವುಗಳ ದೃಷ್ಟಿಯಿಂದ ಮಹತ್ವದ್ದೆನಿಸುವ ಕೆಲವು ದೇವಾಲಯಗಳ ಶಿಲ್ಪಗಳನ್ನು ಮಾತ್ರ ಪರಿಗಣಿಸುವುದು ಯೋಗ್ಯ.

ಚಾಲುಕ್ಯ ಅರಸರ ಪ್ರಶಂಸನೀಯ ಸದ್ಗುಣವೇನೆಂದರೆ ಅವರ ಸರ್ವಧರ್ಮ ಸಮಸನ್ವಯತೆ ಶಿಲ್ಪ ನಿರ್ಮಾಣ ಕಾರ್ಯವು ಒಂದು ಧರ್ಮಕ್ಕೆ ಸೀಮಿತವಾಗಿರದೆ ಆ ಕಾಲದಲ್ಲಿ ಆ ಪ್ರದೇಶದಲ್ಲಿದ್ದ ಪ್ರಚಲಿತದಲ್ಲಿದ್ದ ಎಲ್ಲ ಧರ್ಮ ಪಂಥಗಳಿಗೆ ಸಂಬಂಧಿಸಿದ ಶಿವಾಲಯಗಳು , ವೈಷ್ಣವ ಮಂದಿರಗಳು, ಸೌರಮಂದಿರಗಳು, ಚೈತ್ಯಾಲಯಗಳು, ನಿರ್ಮಾಣಗೊಳ್ಳುವುದರ ಜೊತೆಗೆ ಆಯಾ ಮತ ಪಂಥಗಳಿಗೆ ಸಂಬಂಧಿಸಿದ ಶಿಲ್ಪಗಳನ್ನು ನಿರ್ಮಿಸಿದರು. ಮೂರ್ತಿ ಶಿಲ್ಪದ ಹಿನ್ನಲೆ ಎಂದರೆ ಜನಪದರು ನಂಬಿದ ಧರ್ಮ ಮತ್ತು ಪಾಲಿಸಿದ ಪರಂಪರೆ.

ಹುನಗುಂದ ಪ್ರದೇಶದ ಶಿಲ್ಪಗಳನ್ನು ಅಧ್ಯಯನಕ್ಕೆ ಅನುಕೂಲಕೆಂದು ವಿಂಗಡಿಸಿ ಅಧಯ್ಯನ ಮಾಡಬಹುದು.

1) ಧಾರ್ಮಿಕ ಶಿಲ್ಪಗಳು- ಶೈವ, ವೈಷ್ಣವ, ಜೈನ, ಬೌದ್ಧ, ಶಾಕ್ತ, ಪೌರಾಣಿಕ

2) ಲೌಕಿಕ ಶಿಲ್ಪಗಳು : ರಾಜ, ರಾಣಿ, ಪಕ್ಷಿ, ಪ್ರಾಣಿ, ನಿಸರ್ಗ

3) ಸ್ಮಾರಕ ಶಿಲ್ಪಗಳು : ವೀರಗಲ್ಲು, ಮಹಾಸತಿಗಲ್ಲು, ನಿಶಿಧಿಗಲ್ಲು ಹಾಗೂ ಬಿಡಿಶಿಲ್ಪಗಳು ಹುನಗುಂದ ಪ್ರದೇಶದ ಸುತ್ತ-ಮುತ್ತಲಿನ ಸ್ಥಳಗಳಲ್ಲಿ ದೇವಾಲಯಗಳನ್ನು ಅವಲೋಕಿಸಿದಾಗ ಚಾಲುಕ್ಯರ ಪ್ರಭಾವನ್ನು ಕಾಣಬಹುದು. ಪ್ರಧಾನವಾಗಿ ಶಿಲ್ಪಸ್ಥಳಗಳನ್ನು ನಾಲ್ಕು ವಿಧಗಳನ್ನಾಗಿ ವಿಂಗಡಿಸಬಹುದು.

1) ಬೃಹತ್ ಗಾತ್ರದ ಶಿಲ್ಪಗಳು 2) ಮಧ್ಯಮ ಗಾತ್ರದ ಶಿಲ್ಪಗಳು 3) ಕಥಾನಕ ಶಿಲ್ಪ ಪಟ್ಟಿಕೆಗಳು 4) ಗಣಶಿಲ್ಪಗಳು ಇವುಗಳ ಆಧಾರದ ಮೇಲೆ ಕೆಲವು ದೇವಾಲಯದ ಮೂರ್ತಿ ಶಿಲ್ಪಗಳನ್ನು ಅಧ್ಯಯನ ಮಾಡಬಹುದು.

**1) ಬೃಹತ್ ಗಾತ್ರದ ಶಿಲ್ಪಗಳು :**

ದೇವ - ದೇವತೆಯರ ಶಿಲ್ಪಗಳು ಇವು ಕೊರೆದ ನಿರ್ಮಿಸಲಾದ ಗುಹಾ ದೇವಾಲಯಗಳ ಗೋಡೆಗಳ ಮೇಲೆ ಕೆತ್ತಲಾದವು. ಐಹೋಳೆಯ ಗುಹಾದೇವಾಲಯ ನಟರಾಜ, ಅರ್ಧನಾರೀಶ್ವರ, ಹರಿಹರ, ಪಾರ್ಶ್ವನಾಥ, ಬಾಹುಬಲಿ

ಆಯಾ ದೇವ ದೇವತಾ ಶಿಲ್ಪ ನಿರ್ಮಾಣದಲ್ಲಿ ಪ್ರತಿಮಾ ವೈಶಿಷ್ಟ್ಯಗಳನ್ನು ಶಿಲ್ಪಗಳು ಪಾಲಿಸಿದ್ದಾರೆ. ಪ್ರಮಾಣ ಬದ್ಧತೆ ರೂಪಸಾರದ, ಪಕ್ವತೆ, ಇಡಿಯಾಗಿ ಶಿಲ್ಪಸಂಯೋಜನಾ ಚಾತುರದ ದೃಷ್ಟಿಯಿಂದ ಇವು ಶ್ರೇಷ್ಠ ಶಿಲ್ಪವೆಂದು ತಿಳಿಯಬಹುದು.

**2) ಮಧ್ಯಮ ಗಾತ್ರದ ಶಿಲ್ಪಗಳು :**

ಚಾಲುಕ್ಯರು ನಿರ್ಮಿಸಿದ ರಾಚನಿಕ ಮಂದಿರಗಳನ್ನು ಮಧ್ಯಮ ಗಾತ್ರದ ಶಿಲ್ಪಗಳು ಪ್ರಧಾನವಾಗಿ ದೇವ ಶಿಲ್ಪಗಳು, ಧಾರ್ಮಿಕ ಶಿಲ್ಪಗಳು, ದೇವಾಲಯದ ಹೊರಗೋಡೆ, ದೇವಕೊಷ್ಠ ಸರಸ ಸಲ್ಲಾಪ ಮೂರ್ತಿ, ಸಾಲಭಂಜಿಕಾ ಶಿಲ್ಪಗಳು, ಲೌಕಿಕ ಜೀವನದ ಚಿತ್ರಣವನ್ನು ಇವು ಪರಿಚಯಿಸುತ್ತವೆ.[11] ಐಹೋಳೆಯ ಚಿಕ್ಕಿ ಗುಡಿ ಪುತ್ತಿನಲ್ಲಿರುವ ಶಿಲ್ಪಗಳು, ಅನಂತಶಯನ ವಾಮನ-ತ್ರಿ ವಿಕ್ರಮ ಶಿಲ್ಪಗಳು - ಅನಂರ್ತಶಯನು ಐದು ಹೆಡೆಯ ಹಾವಿನ ಮೇಲೆ ಪವಡಿಸಿದ್ದಾನೆ. ಕೈಗಳಲ್ಲಿ ಆಯುಧಗಳಲ್ಲಿ ನಾಭಿಯಿಂದ ಮೇಲೆದ್ದಿರುವ ಪದ್ಮದಲ್ಲಿ ಬ್ರಹ್ಮನ ಕುಳಿತ್ತಿದ್ದಾನೆ. ಮೆಲ್ಲಗಡೆ ಗದಾ, ಶಂಖ, ಚಕ್ರ ಹಾಗೂ ಖಡ್ಗಗಳನ್ನು ಆಯುಧ ಪುರುಷರಾಕಾರದಲ್ಲಿ ಮಧು-ಕೈಟಭ ರಾಕ್ಷಸರ ಮೇಲೆ ಆಕ್ರಮಣ ಮಾಡುತ್ತಿರುವಂತೆ ಚಿತ್ರಿಸಿದೆ. ಐಹೋಳೆ ಹುಚ್ಚುಮಲ್ಲಗುಡಿ - ಇದರ ಮುಖಮಂಟಪ ಮೇಲ್ಗಂಡಿನಲ್ಲಿ ನವಿಲನ್ನೇರಿದ ಕಾರ್ತಿಕೇಯನ ಉಬ್ಬು ಶಿಲ್ಪ ಆಕರ್ಷಣೆವಾಗಿದೆ. ಎಡಗೈಯಲ್ಲಿ ವಜ್ರ ಹಿಡಿದು ಬಲಗೈಯಲ್ಲಿ ಶೂಲದಿಂದ ಅಸುರನ ಮೇಲೆ ದಾಳಿ ಮಾಡುತ್ತಿದ್ದಾನೆ. <u>ಲಾಡಖಾನ ದೇವಾಲಯ</u> - ಮುಖಮಂಟಪ ಕಂಬಗಳು ಮುಖದಲ್ಲಿ ಗಂಗಾ, ಯಮುನಾ, ಮಿಥುನ, ಕಾಮರತಿ, ಅಶ್ವಮುಖಿ ಮುಂತಾದ ಶಿಲ್ಪಗಳನ್ನು ಬಹುಸುಂದರವಾಗಿ ಕೆತ್ತಿದ್ದಾರೆ. <u>ದುರ್ಗಾದೇವಾಲಯ :</u> ಸ್ತಂಭಗಳ ಶಿಲ್ಪಗಳಲ್ಲಿ ಸೂರ್ಯನು,ಛಾಯೆ ದೇವಿಯನ್ನು ದಂಡಿಸುತ್ತಿರುವುದು, ಅಶ್ವಮುಖಿ ಯಕ್ಷಿ ಮತ್ತು ಬ್ರಹ್ಮಚಾರಿ ಯಕ್ಷಿ, ದ್ವಾರಪಾಲಕ ಇತ್ಯಾದಿ ಶಿಲ್ಪಗಳು ಆಕರ್ಷಣೆಯಾಗಿವೆ.[12]

**<u>ಇಲಕಲ್ ಲಕ್ಷ್ಮೀ ವೆಂಕಟರಮಣ ದೇವಾಲಯ :</u>** ಗೊಂಬಿಗುಡಿ ಎಂದು ಪ್ರಸಿದ್ಧಪಡೆದು ಇದು ಕ್ರಿ.ಶ. 9ನೇ ಶತಮಾನದ ಅವಧಿಯ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣವಾಗಿದೆ ಕೆಂಪು ಮಿಶ್ರಿತ ಮರಳಗಲ್ಲುನಿಂದ ನಿರ್ಮಿತಿವಾಗಿದ್ದು. ವಿಷ್ಣುಮೂರ್ತಿಯ ಕಪ್ಪುಶಿಲೆಯಾಗಿದ್ದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಇದಕ್ಕೆ ಪ್ರಭಾವಳಿ ಇರುತ್ತದೆ ಎಡ ಹಾಗೂ ಬಲಭಾಗದಲ್ಲಿ ಲಕ್ಷ್ಮೀ ಹಾಗೂ ನೀಲಾ ಮೂರ್ತಿಗಳು ಪದ್ಮಕಟಕ ಮುದ್ರೆಯಲ್ಲಿದ್ದಾರೆ.

**<u>ಕರಡಿ ಜೈನಬಸದಿ ದೇವಾಲಯ :</u>** ವಿಷ್ಣು ನಾರಾಯಣ ನಿಂತ ಭಂಗಿಯಲ್ಲಿದ್ದು ಬಿಳಿಶಿಲೆಯಲ್ಲಿದೆ ಎಡಭಾಗದಲ್ಲಿ ಶ್ರೀದೇವಿ ಹಾಗೂ ಬಲಭಾಗದಲ್ಲಿ ನೀಲಾ ಪದ್ಮಕಟಕ ಮುದ್ರೆಯಲ್ಲಿ ಸ್ಥಾನಿಕ ಭಂಗಿಯಲ್ಲಿದ್ದಾರೆ. ವಿಷ್ಣು ಚತುರ್ಭುಜನಾಗಿದ್ದಾನೆ. ಆದಿಶೇಷನ ಪ್ರಭಾವಳಿ ಇದೆ.

**<u>ಸೂಳೇಭಾವಿ :</u>** ಶೂಲೇಶ್ವರ ದೇವಾಲಯದ ಬದಾಮಿ ಚಾಲುಕ್ಯರ ಅವಧಿಯಲ್ಲಿ ನಿರ್ಮಿಸಲಾಗಿದ್ದು. ಇಮಾರತುಗಳಲ್ಲಿ ತ್ರಿಮೂರ್ತಿಗಳಲ್ಲಿ ಬ್ರಹ್ಮನಿಗೆ ಮಧ್ಯದ ಅಂದರೆ ಮುಖ್ಯಸ್ಥಾನವನ್ನು ಕಟ್ಟಿಸಿರುವದು ತೀರ ಅಪರೂಪ ದಕ್ಷಿಣಾಭಿಮುಖವಾಗಿರುವ ದ್ವಾರಬಂಧದಲ್ಲಿ ಆದಿತ್ಯನಿಗೆ ಪ್ರಮುಖ ಸ್ಥಾನವನ್ನು ನೀಡಲಾಗಿದೆ![13]

**<u>ಹುನಗುಂದ ರಾಮಲಿಂಗ :</u>** ಗರ್ಭಗೃಹದಲ್ಲಿ ಗಣಪ ಶಕ್ತಿ ದೇವತೆ ಮಹಿಷಮರ್ಧಿನಿ ಶಿಲ್ಪಗಳು ಎತ್ತರದ ಪೀಠದಲ್ಲಿ ಪೂರ್ವಾಭಿಮುಖವಾಗಿ ಬಲಕ್ಕೆ ಗಣಪ ಮಧ್ಯದಲ್ಲಿ ಶಕ್ತಿದೇವತೆ ಕೊನೆಯಲ್ಲಿ ಮಹಿರ್ಷಿಮರ್ದಿನಿ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ.

**3) ಕಥಾನಕ ಶಿಲ್ಪ ಪಟ್ಟಿಕೆಗಳು** : ಇವು ಚಾಲುಕ್ಯ ಅರಸರು ವೈಶಿಷ್ಟವೆನಿಸುವ ಇನ್ನೊಂದು ಬಗೆಯ ಶಿಲ್ಪಗಳು ದೇವಾಲಯಗಳ ತೊಲೆಗಳ ಮೇಲೆ ಅನುಷ್ಠಾನ ಮೇಲೆ, ಪುರಾಣ, ಭಾಗವತ್, ರಾಮಾಯಣ, ಕೃಷ್ಣಲೀಲೆ, ಮಹಾಭಾರತ, ಸನ್ನಿವೇಶಗಳನ್ನು ಕಂಡಿರಿಸುತ್ತಾರೆ ಸಮುದ್ರಮಥನ, ಪೂತನಿಸಂಹಾರ, ಶಕಟಾಸೂರ, ದೇನುಕಾಸುರ ಮರ್ಧನ ಇವು ವೈಷ್ಣವ ಗುಹಾಯಲದಲ್ಲಿ ಕಾಣಬಹುದು, ಈ ಕಥಾನಕ ಶಿಲ್ಪ ಪಟ್ಟಕೆಗಳ ಪ್ರಧಾನ ಉದ್ದೇಶವು ನೀತಿ ಬೋಧನೆಗೆ ಸಾಕ್ಷಿಯಾಗಿದೆ.

**4) ಗಣಶಿಲ್ಪಗಳು :**

ಇವು ಪುಟ್ಟ ಮೂರ್ತಿಗಳಾಗಿದ್ದು, ಲೌಕಿಕ ಶಿಲ್ಪಗಳಾಗಿವೆ. ಗುಹಾಲಯ, ರಾಚನಿಕ ದೇಗುಲಗಳ ಅನುಷ್ಠಾನಗಳಲ್ಲಿ ಈ ಗಣಶಿಲ್ಪಗಳನ್ನು ಪಟ್ಟಿಕೆಗಳಲ್ಲಿ ಕೆತ್ತಿರುತ್ತಾರೆ. ಮಲ್ಲಯುದ್ಧ, ಹವಾಡಿಗರ, ಸೈನಿಕದಂಡು, ಸಂಗೀತಗಾರರು, ಆನೆಗಳ ಸಾಲು, ಪಕ್ಷಿಗಳು ಸಾಲು, ಹೀಗೆ ಗಣಶಿಲ್ಪಗಳು ಚಾಲುಕ್ಯರ ಎಲ್ಲ ದೇವಾಲಯಗಳ ಅಸಾಧ್ಯ ಕೆಲವು ದೇವಾಲಯಗಳಲ್ಲಿ ಕಾಣಬಹುದಾಗಿದೆ![14]

ಚಾಲುಕ್ಯ ಸ್ಥಪತಿಗಳು ಹಾಗೂ ರೂವಾರಿಗಳು : ಕ್ರಿ.ಶ. 6,7,8 ನೇ ಶತಮಾನದಲ್ಲಿ ಆಳಿದ ಚಾಲುಕ್ಯ ಹಾಗೂ ಅವರ ಸಮಕಾಲಿನ ಅರಸರ ಅವಧಿಯಲ್ಲಿ ಅನೇಕ ಸುಪ್ರಸಿದ್ಧ ಸ್ಥಾಪತಿಗಳ ಹಾಗೂ ಶಿಲ್ಪಗಳು ರಾಜಾಶ್ರಮ ಪಡೆದಿದ್ದು ಅವರ ಕಲ್ಪನಾಶಕ್ತಿ ಹಾಗೂ ಕಲಾಭಿಜ್ಞಾನದಿಂದ ಅನೇಕ ಶಿಲ್ಪಗಳನ್ನು ನಿರ್ಮಾಣ ಮಾಡಿದರು. ಅಂತಹವರನ್ನು ಪ್ರಮುಖರೆಂದರೆ ಶಾಸನಗಳಲ್ಲಿ ಹೆಸರಿಸಿರುವರೆಂದರೆ ಐಹೋಳೆಯ ನರಸೊಬ್ಬ, ಬದಾಮಿಯ ಅರ್ಯಮಂಚಿ ಉಪಾಧ್ಯಾಯ, ಪಟ್ಟದಕಲ್ಲಿನ ಸರ್ವಸಿದ್ಧಿ ಆಚಾರಿ, ಕೋಳಿಮಂಚಿ, ಸಿಂಗಮಂಚಿ, ದುಟ್ಟಜ , ಭಾರತಚಂದ್ರ, ಶರಣಚಂದ್ರ, ಪಂಚಣರೂಪಶೇಖರ, ಕಾಂತಿಮಂಚಿ, ಇನ್ನೂ ಮುಂತಾದಶಿಲ್ಪಗಳು ಹುನಗುಂದ, ಬದಾಮಿ, ಪಟ್ಟದಕಲ್ಲು, ಐಹೋಳೆ, ಪ್ರದೇಶಗಳಲ್ಲಿ ಅನೇಕ ವಿಶೇಷ ಮೂರ್ತಿಗಳನ್ನು ಕಂಡರಿಸಿದ್ದಾರೆ.

**ಅಡಿಟಿಪ್ಪಣಿಗಳು :**

1) ಪುರೋಹಿತ ದ.ರಾ. (ಲೇಖನ) -ಸಿಡಿಲುಪಡೆ -ಬಾಗಲಕೋಟ 2009 ಪು.ಸಂ.-9
2) ಡಾ।। ಶಿವರಾಮ ಕಾರಂ - ಚಿತ್ರಶಿಲ್ಪ ವಾಸ್ತುಕಲೆಗಳು- ಉಪನ್ಯಾಸ ಧಾರವಾಡ - 1975 ಪು.ಸಂ. 23
3) ಪ್ರಭಾಕರ್- ಎಂ.ಎನ್. ದೇವಾಲಯ ವಾಸ್ತು- ಹಂಪಿ 2011 ಪು.ಸಂ.-18-19
4) ಕೊಪ್ಪ ಎಸ್.ಕೆ.–ತರ್ದವಾಡಿನಾಡು ಒಂದು ಅಧ್ಯಯನ -ಇಂಡಿ 1990 ಪು.ಸಂ.-304
5) ಡಾ।! ರಾಜಶೇಖರ ಎಸ್. -ಶ್ರೀ ವಲ್ಲಭ (ಲೇಖನ) ಬಾಗಲಕೋಟ - 2006 -312
6) ಡಾ।। ರಾಜಶೇಖರ ಎಸ್. -ಶ್ರೀ ವಲ್ಲಭ (ಲೇಖನ) ಬಾಗಲಕೋಟ - 2006 ಪು.ಸ.. 314
7) ಡಾ।। ತಿಪ್ಪೇರುದ್ರಸ್ವಾಮಿ ಎಸ್–ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಮೈಸೂರ - 1968 -ಪು. ಸಂ.-541
8) ಅತ್ತಾರ ಅಮೀನುದ್ದೀನ (ಲೇಖನ) -ಹೊನ್ನಸಿರಿ -ಹುನಗುಂದ - 2007 ಪು.ಸಂ.-16
9) ವ್ಹಾಯ್. ಎಸ್.ಸಿ–ಹುನಗುಂದ ನಾಡಿನ ಹತ್ತೂರ ಶಿಲ್ಪಕಲೆ (ಪ್ರಬಂಧ) ಧಾರವಾಡ 1998 ಪು.ಸಂ.-32
10) ಶೀಲಾಕಾಂತ ಪತ್ತಾರ (ಲೇಖನ)-(ಮಲಾಪಹಾರಿ)- ಬಾಗಲಕೋಟೆ 2008 -ಪು.ಸಂ.-27
11) ಶೀಲಾಕಾಂತ ಪತ್ತಾರ (ಲೇಖನ) (ಮಲಾಪಹಾರಿ)- ಬಾಗಲಕೋಟೆ 2008 -ಪು.ಸಂ.-28,29
12) ಶ್ರೀನಿವಾಸ ಪಾಡಿಗಾರ -ಶ್ರೀವಲ್ಲಭ (ಲೇಖನ) ಬಾಗಲಕೋಟೆ - 2006 ಪು.ಸಂ. 305-306
13) ವ್ಹಾಯ್. ಎಸ್.ಸಿ–ಹುನಗುಂದ ನಾಡಿನ ಹತ್ತೂರ ಶಿಲ್ಪಕಲೆ (ಪ್ರಬಂಧ) ಧಾರವಾಡ 1998 ಪು.ಸಂ.- 105
14) ಶೀಲಾಕಾಂತ ಪತ್ತಾರ (ಲೇಖನ) (ಮಲಾಪಹಾರಿ)- ಬಾಗಲಕೋಟೆ 2008 ಪು.ಸಂ.-78,79

# ಅಧ್ಯಾಯ - ಐದು

## ಹುನಗುಂದ ಪ್ರದೇಶದ ಮೂರ್ತಿ ಶಿಲ್ಪಗಳ -ವಿಶ್ಲೇಷಣೆ

ಕರ್ನಾಟಕವು ಕ್ರಿ.ಶ. 6ನೇ ಶತಮಾನದಿಂದ ಕ್ರಿ.ಶ. 8ನೇ ಶತಮಾನದ ಕಲಾ ಚರಿತ್ರೆಯನ್ನು ಗಮನಿಸಿದಾಗ, ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕ್ಕೆ ಭದ್ರವಾದ ತಳಹದಿಯನ್ನು ಹಾಕಿದ ಅವಧಿಯೆಂದು ಗುರುತಿಸಬಹುದು. ಏಕೆಂದರೆ ಈ ಅವಧಿಯಲ್ಲಿ ಚಾಲುಕ್ಯರ ಆಡಳಿತ ಆರಂಭವಾಗಿತ್ತು. ಅಗಾಧವಾದ ಶಿಲ್ಪಕಲಾ ಸಂಪತ್ತು ಈ ಅವಧಿಯಲ್ಲಿ ಸೃಷ್ಟಿಯಾಯಿತು. ಭಾರತೀಯ ಮೂರ್ತಿಗಳನ್ನು ಈ ರೀತಿ ವರ್ಗಿಕರಿಸಬಹುದು- 1) ಹಿಂದೂವಿಗ್ರಹಗಳು - 1)ಶೈವ, ವೈಷ್ಣವ, ಶಾಕ್ತ, 2) ಬೌದ್ಧವಿಗ್ರಹಗಳು 3)ಜೈನ ವಿಗ್ರಹಗಳು ಈ ರೀತಿ ವರ್ಗೀಕರಿಸಿಕೊಂಡು ಶಿಲ್ಪವನ್ನು ಅಧ್ಯಯನ ಮಾಡಬಹುದು ಈ ಕೆಳಗಿನಂತೆ ಶಿಲ್ಪಗಳ ಅವಧಿಗಳನ್ನು ಗುರ್ತಿಸಬಹುದು 1) ಚಾಲುಕ್ಯ ಪೂರ್ವಯುಗ, 2) ಚಾಲುಕ್ಯಯುಗ 3) ರಾಷ್ಟ್ರಕೂಟಯುಗ 4) ಹೋಯ್ಸಳರಯುಗ 5) ವಿಜಯನಗರ ಯುಗ, ಎಂದು ಸ್ಥೂಲವಾಗಿ ಹೇಳಬಹುದು ಈ ಎಲ್ಲ ಅವಧಿಯಲ್ಲಿ ಮೂರ್ತಿಶಿಲ್ಪ ತನ್ನದೆಯಾದ ವೈಶಿಷ್ಟ್ಯಯಿಂದ ಧಾರ್ಮಿಕ ನಂಬಿಕೆಯ ಆಧಾರದ ಮೇಲೆ ಹುನಗುಂದ ಪ್ರದೇಶದೆಲ್ಲಾ ಸಿಕ್ಕಿರುವ ಮೂರ್ತಿಶಿಲ್ಪಗಳ ವಿಶ್ಲೇಷಣೆಯ ಅಧ್ಯಯನ ಮಾಡಬಹುದು.

ಬಾಗಲಕೋಟ ಜಿಲ್ಲೆಯ ಹುನಗುಂದ ತಾಲೂಕು ಇತರ ಆರು ತಾಲೂಕುಗಳಿಗಿಂತ ದೊಡ್ಡದಾಗಿದೆ. 168 ಹಳ್ಳಿಗಳನ್ನು ಒಳಗೊಂಡ ಈ ಪ್ರದೇಶ ವಿಸ್ತಾರವಾಗಿದೆ. ಆದರೆ ನನ್ನ ಕ್ಷೇತ್ರದಿಂದ ಅಭ್ಯಾಸಕ್ಕೆ ಅನುಗುಣವಾಗಿ ಐತಿಹಾಸಿಕವಾಗಿ ಪ್ರಸಿದ್ಧಪಡೆದ ಶಾಸನಗಳಲ್ಲಿ ಹೆಸರು ಉಲ್ಲೇಖವಿರುವ ಹದಿನಾರು ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರನೇಷ್ವಣೆಯನ್ನು ಕೈಕೊಂಡಿದ್ದೇನೆ, ಅವುಗಳೆಂದರೆ, ಅರಿಸಿಬೀದಿ, ಗೂಡೂರ, ಎಸ್.ಸಿ., ಚಿತ್ತವಾಡಗಿ, ಸೂಳೆಬಾವಿ, ಹುನಗುಂದ, ಕೂಡಲಸಂಗಮ, ಕರಡಿ, ಇಲಕಲ್, ಹೇರೂರು, ಚಿನ್ನಾಪೂರ, ನಂದವಾಡಗಿ, ತೂರಮರಿ, ಹೀರೆಶಿಂಗನಗುತ್ತಿ, ನಂದವಾಡಗಿ, ಕಂದಗಲ್, ಸೋಮಲಾಪೂರ.

ಈ ಗ್ರಾಮಗಳು ಮತ್ತು ನಗರಗಳು ಹುನಗುಂದ ತಾಲೂಕು ಕೇಂದ್ರದಿಂದ 5 ಕಿ.ಮೀ ದೂರದಿಂದ 30 ಕಿ.ಮೀ ವ್ಯಾಪ್ತಿಯನ್ನು ಒಳಗೊಂಡಿವೆ ನಾನು ನನ್ನ ಕ್ಷೇತ್ರ ಕಾರ್ಯಕ್ಕಾಗಿ ಈ ಎಲ್ಲ ಗ್ರಾಮಗಳಿಗೆ ಭೇಟಿಕೊಟ್ಟು ಸ್ಥಳಿಯ ಗ್ರಾಮದ ಹಿರಿಯರ ಸಹಕಾರದಿಂದ ಎಲ್ಲ ದೇವಾಲಯಗಳು ಮೂರ್ತಿಶಿಲ್ಪಗಳ ಚಾಯಾಚಿತ್ರವನ್ನು ತೆಗೆದುಕೊಂಡಿದ್ದೇನೆ. ಸ್ಥಳೀಯ ಪುರಾಣ, ಚರಿತ್ರೆ, ನಂಬಿಕೆ, ಆಧಾರದ ಮೇಲೆ ಇಲ್ಲಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ದೇವಾಲಯಗಳು, ಬಸದಿಗಳು, ಶಿಲ್ಪಗಳು; ಶಾಸನಗಳು, ಹುಡೇಗಳು, ವೀರಗಲ್ಲು, ಕೋಟೆಗಳು, ಮಹಾಸತಿಗಲ್ಲು, ನಿಷೀದಿಗಲ್ಲುಗಳು ಆಯಾ ಗ್ರಾಮದ ಚರಿತ್ರೆಯನ್ನು ಸಾದರಪಡಿಸುವ ಜೀವಂತ ಸಾಕ್ಷಿಯಾಗಿವೆ.

ಹುನಗುಂದ ಪ್ರದೇಶದಲ್ಲಿ ಲಭ್ಯವಾಗಿರುವ ಮೂರ್ತಿಶಿಲ್ಪಗಳೆಂದರೆ, ಗಜಲಕ್ಷ್ಮೀ, ನರ್ತಕಿಯರು , ವಾದ್ಯ,ವೃಂದ, ನಾಟ್ಯಶಿವ, ಉಮಾಸಹಿತಶಿವ, ನರ್ತನವಿಷ್ಣು, ತ್ರಿವಿಕ್ರಮ, ನಾಟ್ಯಲಕ್ಷ್ಮೀ, ದ್ವಾರಪಟ್ಟಿಕೆಯ ದ್ವಾರಪಾಲಕರ, ಮಹಿಷಾಸುರಮರ್ದಿನಿ, ನರ್ತನಗಣಗಳು, ಸಾಲಭಂಜಿಕೆ, ತಮಟೆನೃತ್ಯ, ಗಜಸಾಲಗಳು, ಅಶ್ವ ಸಾಲಗಳನಿದಿ, ನಾಗಶಿಲ್ಪಗಳು, ಗಣಪತಿ, ಆಂಜನೇಯ, ಶಿವಲಿಂಗ, ನಂದಿವಿಗ್ರಹ, ಅನಂತಶಯನ, ಮುಂತಾದ ಶಿಲ್ಪಗಳು ಈ ಪ್ರದೇಶದಲ್ಲಿ ದೊರೆಯುತ್ತವೆ. ಇವುಗಳನ್ನು ಹಿಡಿಯಾಗಿ ನೋಡದೆ ಬಿಡಿ ಬಿಡಿಯಾಗಿ ವಿಂಗಡಿಸಿ ಶಿಲ್ಪಗಳಿಗೆ ಬಳಸಲಾದ ಕೇಶಲಂಕಾರ,

ಕಿವಿಯ ಆಭರಣಗಳು, ಕಂಠಾಭರಣಗಳು, ಬ್ರಹ್ಮಸೂತ್ರ,- ಕಟಿಸೂತ್ರಗಳು, ತೋಳುಬಂದಿಗಳು, ಮಣಿಕಂಠ, ಕಡಗಗಳು, ತೊಡಿಗೆ ಕಾಲಂದಿಗೆ, ಕಾಲಗಡಗ, ಪಾದಾಭರಣಗಳು, ಇವುಗಳ ಆಧಾರದ ಮೇಲೆ ಶಿಲ್ಪವನ್ನು ಗುರ್ತಿಸಬಹುಸು. ಶಿಲ್ಪಗಳಲ್ಲಿ ಬಳಸುವ ಹಸ್ತಮುದ್ರಿಕೆಗಳು ಅಥವಾ ಸಂಯುತ ಮತ್ತು ಅಸಂಯತ ಹಸ್ತಗಳು ಹಾಗೂ ನಾಟ್ಯಶಾಸ್ತ್ರದ ಕರಣಗಳು ಹಾಗೂ ತಂತಿ ವಾದ್ಯಗಳು, ತತ್ವವಾದ್ಯಗಳು, ಸುಶಿರವಾದ್ಯಗಳು, ಘನವಾದ್ಯಗಳು ಅವನದ್ಯ ವಾದ್ಯಗಳು, ಯಾರ ಅವಧಿಯಲ್ಲಿ ಯಾವ್ಯಾವುಗಳನ್ನು ಬಳಸಿದ್ದಾರೆ ಎಂಬುವುಗಳನ್ನು ಗುರ್ತಿಸಬಹುದು. ಮತ್ತು ಶಿಲ್ಪಗಳಲ್ಲಿ ಬಳಸಲಾದ ಕಿರೀಟಗಳು, ಆಯುಧಗಳು, ಇವುಗಳ ಆಧಾರದ ಮೇಲೆ ಈ ಶಿಲ್ಪಗಳು ಯಾವ ಧರ್ಮಕ್ಕೆ ಸಂಬಂಧಿಸಿವೆ ಎಂಬುದನ್ನು ಸ್ಥೂಲವಾಗಿ ವಿವರಿಸುತ್ತಾ ಬಂದಿದ್ದೇನೆ.

ಶಿಲ್ಪಗಳ ವಿಶ್ಲೇಷಣೆ ಮಾಡುತ್ತ ಸೂಕ್ಷ್ಮವಾಗಿ ಗಮನಿಸಿದಾಗ ಶೈವ, ವೈಷ್ಣ, ಮೂರ್ತಿಗಳು ವಿವಿಧ ಭಂಗಿಗಳಲ್ಲಿ ಸ್ಥಾನಿಕ, ಸಮನಖ, ಶಯನ, ಸ್ಥಿತಿಯಲ್ಲಿ ಕಾಣಬಹುದು, ಹಾಗೂ ನೃತಶಿಲ್ಪಗಳು ಪ್ರಮುಖವಾಗಿ ಸ್ವಸ್ತಿಕರೇಚಿತ, ಕಬಿಚ್ಛಿನ್ನ ಕಟೀಸಮ, ವಲಿತ, ಭೂಜಂಗಾಂಚಿತರ, ವಿಷ್ಣುಕ್ರಾಂತ, ಸಿಂಹವಿಕ್ರೀಡಿತ ಮುಂತಾದ ಭಂಗಿಗಳಲ್ಲಿ ಶಿವ, ವಿಷ್ಣುವಿನ ನೃತ್ಯಶಿಲ್ಪಗಳನ್ನು ಈ ಪ್ರದೇಶದಲ್ಲಿ ಕಾಣಬಹುದು.

# ೧-ಅರಸಿಬೀದಿ

ಜಿಲ್ಲೆ : ಬಾಗಲಕೋಟ

ತಾಲೂಕು : ಹುನಗುಂದ

ಗ್ರಾಮ : ಅರಸಿಬೀದಿ

ಹೋಬಳಿ : ಗೂಡೂರ

ಮಾರ್ಗ : ಬದಾಮಿ-ಗೂಡೂರ

ಜನವಸತಿ : ಇರುವುದಿಲ್ಲ

**ಸ್ಥಳ : ಪರಿಚಯ :**

ಬಾಗಲಕೋಟ ಜಿಲ್ಲೆಯ ಹುನಗುಂದ ತಾಲೂಕಿನ ಐಹೋಳೆಯಿಂದ ಸಮೀಪದಲ್ಲಿರುವ ಗುಡೂರ ಗ್ರಾಮದ ಬಲಕ್ಕೆ 5 ಕಿ.ಮೀ ಅಂತರದಲ್ಲಿರುವ ಅರಸಿಬೀದಿ ಒಂದು ಕಾಲಕ್ಕೆ ರಾಜಧಾನಿಯಾಗಿ ಮೆರೆದ ಸ್ಥಳ. ಇಂದು ಅವಶೇಷಗಳಡಿಯಲ್ಲಿ ಹೂತುಹೋದ ಪ್ರದೇಶ. ಕಲ್ಯಾಣಿ ಚಾಲುಕ್ಯರಲ್ಲಿ ಸ್ವತಂತ್ರ ರಾಜ್ಯಭಾರ ನಡೆಸಿದ ಕೆಲವೇ ರಾಣಿಯರಲ್ಲಿ ಒಬ್ಬಳಾದ ರಾಣಿ ಅಕ್ಕದೇವಿಯು ಕ್ರಿ.ಶ.11 ರಿಂದ 13 ನೇ ಶತಮಾನದ ಸುಮಾರಿನಲ್ಲಿ ಅರಸಿಬೀದಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದಳು. ಅರಸಿಬೀದಿ ಈಗ ಸಂಪೂರ್ಣ ಜನವಸತಿ ರಹಿತ ಗ್ರಾಮ. ಈಗ ಪಾಳುಬಿದ್ದಿರುವ ಎರಡು ಜಿನಾಲಯಗಳು ಇವೆ. ಗುಣದ ಬೇಡಂಗ ಜಿನಾಲಯ ಮತ್ತು ತ್ರಿಕೂಟ ಜಿನಾಲಯ ಶಿಥಿಲ ವ್ಯವಸ್ಥೆಯಲ್ಲಿವೆ, ಅರಸಿಬೀದಿ ಜಿನಾಲಯದಲ್ಲಿ 1048, 1047, ರಲ್ಲಿ ಎರಡು ಶಾಸನಗಳಿವೆ.

**ಸ್ಥಳ ಐತಿಹ್ಯ :**

ಚಾಲುಕ್ಯರ ದಶವರ್ಷ, ಭಾಗಲದೇವಿಯ ಮಗಳಾದ ರಾಣಿಅಕ್ಕಾದೇವಿ "ಕಿಸುಕಾಡು" ಎಪ್ಪತ್ತು ಪ್ರದೇಶವನ್ನು ಆಳುತ್ತಿದ್ದಾಳೆಂದು ಸೂಡಿ ಮತ್ತು ಬೇಲೂರ ಶಾಸನಗಳು ಹೇಳುತ್ತವೆ, ಕಿಸುಗಾಡು ಪ್ರದೇಶವನ್ನೂ ಆಳುವಾಗಿನ ಇವಳ ರಾಜಧಾನಿ "ವಿಕ್ರಮಪುರ" ತರುವಾಯ ಇದು "ಅರಸಿಬೀದಿ" ಎಂದು ಹೆಸರಾಗಿದೆ.

**ವಾಸ್ತುಕಲೆ :**

ಕ್ರಿ.ಶ. 1047 ಶತಮಾನದಲ್ಲಿ ನಿರ್ಮಾಣವಾದ ಎರಡು ಜಿನಾಲಯಗಳಿವೆ ತ್ರಿಕೂಟ ಜಿನಾಲಯ, ಗುಣದ ಬೇಡಂಗಿ ಜಿನಾಲಯ, ಹಾಗೂ ಒಂದು ಐತಿಹಾಸಿಕ ಕರೆ ಇದೆ. ತ್ರಿಕೂಟ ಜಿನಾಲಯ ವಿಶೇಷವಾಗಿದೆ. ಮುಖಮಂಟಪ, ಸಭಾಮಂಟಪ, ಅಂತರಾಳ ಅದಕ್ಕೆ ಹೊಂದಿಕೊಂಡಂತೆ ಗರ್ಭಗೃಹ ಇದೆ. ಸಭಾ ಮಂಟಪದಲ್ಲಿ ನಾಲ್ಕು ಸ್ತಂಭಗಳಿವೆ. ದ್ವಾರಬಂಧದಲ್ಲಿ ಲತೆ, ಸ್ತಂಭ, ಮತ್ತು ಕಮಲಗಳ ಶಾಖೆಕಾಣಬಹುದು. ಜಿನಮೂರ್ತಿ ಭಗ್ನವಾಗಿದೆ.

| | | | |
|---|---|---|---|
| ೧. | **ದೇವಾಲಯ** | : | **ಗುಣದ ಬೇಡಂಗಿ ಜಿನಾಲಯ** |
| | ಮೂರ್ತಿ | : | ಜಿನ |
| | ಭಂಗಿ | : | ನಿಂತಭಂಗಿ |
| | ದಿಕ್ಕು | : | ಉತ್ತರಾಭಿಮುಖ |
| | ಕಾಲ | : | 10ನೇ ಶತಮಾನ |
| | ಶಿಲೆ | : | ಬಿಳಿ ಉಸುಕು ಕಲ್ಲು |
| | ಅಳತೆ | : | ಎತ್ತರ : 50 ಸೆಂ.ಮಿ. |
| | | | ಅಗಲ : 40 ಸೆಂ.ಮೀ. |
| | ಸ್ಥಿತಿ | : | ಶಿಥಿಲ |

**ಮೂರ್ತಿಯ ವೈಶಿಷ್ಟ :**

ಭಗ್ನಾವ್ಯವಸ್ಥೆಯಲ್ಲಿರುವ ಗುಣದ ಬೇಡಂಗಿ ಜಿನಾಲಯದ ದ್ವಾರದ ಮುಂದೆ ಬಾಗಿಲವಾಡನ್ನಾಧರಿಸಿ ನಿಂತಿರುವ ದ್ವಾರತೋರಣ ಸ್ತಂಭಗಳನ್ನು ಆಧರಿಸಿ ನಿಂತಿದೆ. ಗರ್ಭಗೃಹ ಮತ್ತು ಮುಖ ಮಂಟಪ ಮಧ್ಯವಿದೆ. ತೋರಣಾಲಂಕಾರ ಭಿತ್ತಿಕೋಷ್ಠದ ಮಧ್ಯದಲ್ಲಿ ಸ್ಥಾನಿಕ ಭಂಗಿನಲ್ಲಿ ಜಿನಾಲಯವಿದೆ. ಐದು ಕಮಾನು ಲತಾಲಂಕಾರ ಮಧ್ಯದಲ್ಲಿ ಸಿಂಹದ ತರವಿರುವ ಅಸ್ಪಷ್ಟವಾದ ಶಿಲ್ಪಕಾಣಬಹುದು.

| | | |
|---|---|---|
| **೨. ದೇವಾಲಯ** | : | **ತ್ರಿಕೂಟ ಜಿನಾಲಯ** |
| ಮೂರ್ತಿ | : | ಧ್ವಾರಪಾಲಕಿ |
| ಭಂಗಿ | : | ನಿಂತಭಂಗಿ |
| ದಿಕ್ಕು | : | ಉತ್ತರಾಭಿಮುಖ |
| ಕಾಲ | : | 10 ನೇ ಶತಮಾನ |
| ಶಿಲೆ | : | ಬಿಳಿ ಉಸುಕು ಕಲ್ಲು |
| ಅಳತೆ | : | 50 ಸೆಂ.ಮೀ. |
| | | 40 ಸೆಂ.ಮೀ. |
| ಸ್ಥಿತಿ | : | ಶಿಥಿಲ |

**ಮೂರ್ತಿಯ ವೈಶಿಷ್ಟ :**

ತ್ರಿಕೂಟ ಜಿನಾಲಯು ಅತ್ಯಂತ ಶೋಚನೀಯ ಸ್ಥಿತಿಯಲ್ಲಿದೆ. ಇಲ್ಲಿಯ ಪ್ರತಿಮೆ ಹಾಗೂ ಸ್ತಂಭಗಳು ಭಗ್ನವಾಗಿವೆ. ಚಾಲುಕ್ಯರ ಕಾಲದ ಕಲಾ ನೈಪುಣ್ಯತೆಯ ಅದ್ಭುತ ವಾಸ್ತುಶಿಲ್ಪವನ್ನು ಹೊಂದಿದ್ದರೂ, ತ್ರಿಕೂಟ ಜಿನಾಲಯ ಗರ್ಭಗುಡಿಯ ಎಡಭಾಗದಲ್ಲಿ ಜಿನಮೂರ್ತಿ ತುಂಡು ತುಂಡಾಗಿ ಹೊರಬಿದ್ದಿವೆ. ಜಿನಾಲಯದ ಗರ್ಭಗೃಹದ ಎಡಭಾಗದಲ್ಲಿರುವ ದೇವಕೋಷ್ಠಕದಲ್ಲಿ ದ್ವಾರಪಾಲಿಕೆಯ ಮೂರ್ತಿ ಸುಸ್ಥಿತಿಯಲ್ಲಿದ್ದು ಸಮನಖ ಸ್ಥಾನಿಕ ಭಂಗಿಯಲ್ಲಿದೆ ಕೇಶಲಂಕಾರ, ಕಿವಿಯ ಆಭರಣ, ಸ್ಥನಹಾರ, ಬಾಹುಬಲಯ ಆಭರಣಗಳು, ಕಾಲಂದಿಗೆ ಕಟಿಯ ಆಭರಣ ಜೋಡಿಗೆ ಧರಿಸಿದ ಮೂರ್ತಿ ವಿಶೇಷವಾಗಿದೆ. ಇದು ಚಾಲ್ಕುರ ಕಾಲದ ವಿಶೇಷ ಶಿಲ್ಪವಾಗಿದೆ.

# ೨- ಗುಡೂರ (ಎಸ್.ಸಿ)

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ಬದಾಮಿ -ಹುನಗುಂದ |
| ತಾಲೂಕ | : | ಹುನಗುಂದ | ಜನಸಂಖ್ಯೆ | : | ೧೫೦೦೦ |
| ಗ್ರಾಮ | : | ಗೂಡೂರ | ಹೋಬಳಿ | : | ಗೂಡೂರ |

**ಸ್ಥಳ : ಪರಿಚಯ :**

ಇದು ಹುನಗುಂದ ಕೇಂದ್ರಸ್ಥಾನದಿಂದ ಗುಡೂರ ಎಸ್.ಸಿ, ೨೪ ಕಿ.ಮೀ. ದೂರದಲ್ಲಿದೆ. ಈ ಗ್ರಾಮಕ್ಕೆ ಹೊಂದಿಕೊಂಡಂತೆ ಅರಿಸಿಬೀದಿ ಐಹೋಳೆ ಪ್ರದೇಶಗಳಿವೆ. ಎರಡು ತ್ರುಟಿತಗೊಂಡ ಶಾಸನಗಳಿದ್ದು ಬದಾಮಿ ಚಾಲುಕ್ಯ ಪ್ರಸಿದ್ಧ ರಾಣಿ ಅಕ್ಕಾದೇವಿಯ ಆಡಳಿತಕ್ಕೆ ಒಳಪಟ್ಟಿತ್ತು. ಚಾಲುಕ್ಯ ಅವಧಿಯಲ್ಲಿ ನಿರ್ಮಾಣದ ಕ್ರಿ.ಶ. ೧೦ನೇ ಶತಮಾನದ ಹಾಗೂ ಹುಲ್ಲೇಶ್ವರ ದೇವಸ್ಥಾನ, ರಾಮಲಿಂಗೇಶ್ವರ ದೇವಸ್ಥಾನ ಪ್ರಮುಖವಾಗಿವೆ. ಈ ದೇವಸ್ಥಾನದ ಆವರಣದಲ್ಲಿ ದೀಪಸ್ತಂಭ, ವೀರಗಲ್ಲು, ಬಿಡಿಶಿಲ್ಪಗಳು, ನಾಗಮೂರ್ತಿಗಳು, ಲಭ್ಯವಾಗಿವೆ. ಐತಿಹಾಸಿಕವಾಗಿ, ಪ್ರಸಿದ್ಧ ಪಡೆದ ಈ ಗ್ರಾಮ ನೇಕಾರಿಕೆಗೆ ಬಹಳ ಪ್ರಸಿದ್ಧ ಪಡೆದಿದೆ.

**ಸ್ಥಳ ಐತಿಹ್ಯ :**

ಕ್ರಿ.ಶ. ೧೦ನೇ ಶತಮಾನದಲ್ಲಿ ಅರಿಸಿಬೀದಿಯಲ್ಲಿ ವಾಸಿಸುತ್ತಿದ್ದ ಜನರು ಅಲ್ಲಿಯ ಕೆರೆಯ ಮಲೆತ ನೀರನ್ನು ಕುಡಿಸು ಅಸ್ವಸ್ಥರಾದಾಗ ಆ ಪ್ರದೇಶ ಬಿಟ್ಟು ಗುಡ್ಡಗಳ ಎಡಭಾಗದಲ್ಲಿ ಜನರು ಬಂದು ನೆಲೆಸಿದರು ಆದ್ದರಿಂದ ಗುಡ್ಡಗಳ ಮಧ್ಯದಲ್ಲಿ ಇದುದ್ದರಿಂದ ಇದಕ್ಕೆ ಗುಡೂರ ಎಂದು ಹೆಸರು ಬಂದಿದೆ ಎಂದು ಸ್ಥಳಿಯರ ನಂಬಿಕೆಯಾಗಿದೆ.

**ವಾಸ್ತುಕಲೆ :**

'ಕೆಂಪು ಮಿಶ್ರಿತ ಕಲ್ಲುಗಳಿಂದ ನಿರ್ಮಿತವಾದಗೂಡೂರಿನ ಪ್ರಾಚೀನ ದೇವಾಲಯುಗಳು ಇಂದಿಗೂ ಸುಸ್ಥಿತಿಯಲ್ಲಿದ್ದು. ಪೂಜೆಗೆ ಒಳಪಟ್ಟಿವೆ. ಊರಿಗೆ ಮಧ್ಯದಲ್ಲಿರುವ ದೇವಾಲಯಗಳು, ಔತ್ತರೇಯ ದ್ರಾವಿಡಶೈಲಿಯಲ್ಲಿ ನಿರ್ಮಾಣವಾಗಿವೆ. ರಾಮಲಿಂಗೇಶ್ವರ ದೇವಾಲಯ ಹಾಗೂ ಹುಲ್ಲೇಶ್ವರ ದೇವಾಲಯ ಈ ದೇವಾಲಯುಗಳಲ್ಲಿ ದ್ವಾರಬಾಗಿಲು, ಸಭಾಮಂಟಪ, ಗರ್ಭಗೃಹ, ಶಿಖರಗಳನ್ನು ಒಳಗೊಂಡಿವೆ. ನಕ್ಷತ್ರಕಾರದಲ್ಲಿ ನಿರ್ಮಾಣವಾದ ಈ ದೇವಾಲಯ ಚಾಲುಕ್ಯರ ಅವಧಿಯಲ್ಲಿ ನಿರ್ಮಾಣವಾಗಿವೆ. ದ್ವಾರಬಾಗಿಲದ ಎಡ ಮತ್ತು ಬಲಭಾಗದಲ್ಲಿ ಕುದುರೆ ಏರಿದ ವೀರದಂಪತಿಗಳ ಶಿಲ್ಪ ಮನಮೋಹಕವಾಗಿದೆ.

| | | |
|---|---|---|
| ದೇವಾಲಯ | : | ರಾಮಲಿಂಗೇಶ್ವರ |
| ಶಿಲ್ಪ | : | ಶಿವಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೦ನೇ ಶತಮಾನ |
| ಶಿಲೆ ' | : | ಕಪ್ಪು ಶಿಲೆ |
| ಅಳತೆ | : | ೭೦ ಸೆಂ.ಮೀ ಎತ್ತರ |
| | | ೮೦ ಸೆಂ.ಮೀ ಅಗಲ |
| ಸ್ವರೂಪ | : | ದುಂಡು ಶಿಲ್ಪ |
| ಸ್ಥಿತಿ | : | ಸುಸ್ಥಿತಿ |

**ಶಿವಲಿಂಗದ ವೈಶಿಷ್ಟ್ಯ :**

ರಾಮಲಿಂಗೇಶ್ವರ ದೇವಸ್ಥಾನ ಊರಿನ ಮಧ್ಯದಲ್ಲಿದೆ. ಈ ದೇವಾಲಯ ಪೂರ್ವಾಭಿಮುಖವಾಗಿದ್ದು, ಇದೊಂದು ಚಾಲುಕ್ಯರಕಾಲದ ಪ್ರಾಚೀನ ದೇವಾಲಯವಾಗಿದೆ. ಶಿಖರ, ಗರ್ಭಗೃಹ, ಅಂತರಾಳ, ಮುಖಮಂಟಪ ಸಭಾಮಂಟಪ ಹೊಂದಿದೆ. ಔತ್ತರೇಯ ದ್ರಾವಿಡ ಶೈಲಿಯಲ್ಲಿದೆ. ದೇವಾಲಯ ಗರ್ಭಗೃಹದಲ್ಲಿ ಯೋನಿಯ ಪೀಠದ ಮೇಲೆ ಶಿವಲಿಂಗವಿದ್ದು ಅದರ ಮೇಲೆ ಬೆಳ್ಳಿಯ ರಾಮಲಿಂಗೇಶ್ವರ ಮೂರ್ತಿ ಬೆಳ್ಳಿಯಾಕರದಲ್ಲಿದೆ. ದ್ವಾರಬಂಧದ ಮೇಲೆ ತೋರಣಾಲಂಕಾರ, ಭತ್ತಿಕೋಷ್ಠ, ರಚನೆಗಳನ್ನು ಕಾಣಬಹುದು. ದ್ವಾರತೋರಣಗಳ ಮಧ್ಯದ ಗುಹಾಭಾಗದಲ್ಲಿ ದೇವ-ದೇವತೆಗಳ ವಿಗ್ರಹಗಳನ್ನು ಇಡಲಾಗಿದೆ. ಭೂತ ವಿದ್ಯಾಧರ ಯಾಳಿ, ಹಂಸ, ಸಿಂಹ ಮುಖಗಳು ಮತ್ತಿನ ಹಾರ ಧರಿಸಿದಂತೆ ಕಾಣುತ್ತದೆ. ಗರ್ಭಗೃಹದ ಎದುರಿಗೆ ಬಿಳಿ ಉಸಕುಕಲ್ಲಿನ ನಂದಿವಿಗ್ರಹ ೭೦ ಸೆಂ.ಮೀ ಎತ್ತರ ೬೫ ಸೆಂ.ಮೀ ಅಗಲವಾಗಿದೆ. ಈ ಮೂರ್ತಿಯು ಸುಸ್ಥಿತಿಯಲ್ಲಿದೆ.

| | | |
|---|---|---|
| ದೇವಾಲಯ | : | ಹುಲ್ಲೇಶ್ವರ ದೇವಾಲಯ |
| ಮೂರ್ತಿ | : | ವೀರಭದ್ರೇಶ್ವರ ಮತ್ತು ಹುಲ್ಲೇಶ್ವರ ಮೂರ್ತಿ |
| ದಿಕ್ಕು | : | ಉತ್ತರಾಭಿಮುಖ |
| ಕಾಲ | : | ೧೦ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ, |
| ಭಂಗಿ | : | ಸ್ಥಾನಿಕಭಂಗಿ |
| ಸ್ವರೂಪ | : | ಉಬ್ಬು ಶಿಲ್ಪ |
| ಅಳತೆ | : | ಎತ್ತರ ೬೦ ಸೆಂ.ಮೀ |
| | | ಅಗಲ ೫೦ ಸೆಂ.ಮೀ |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯ :**

ಹುಲ್ಲೇಶ್ವರ ದೇವಾಲಯ ದ್ವಾರಬಾಗಿಲ, ಪ್ರದಕ್ಷಣಾಪಥ, ಸಭಾಮಂಟಪ, ಅಂತರಾಳ, ಗರ್ಭಗೃಹ ಹಾಗೂ ಶಿಖರವನ್ನು ಹೊಂದಿದೆ. ಇದು ಚಾಲುಕ್ಯರ ಅವಧಿಯಲ್ಲಿ ನಿರ್ಮಾಣವಾಗಿದೆ. ಕೆಂಪು ಮಿಶ್ರಿತ ಶಿಲೆಯನ್ನು ಈ ದೇವಾಲಯ ಹೊಂದಿದೆ. ಇದರ ಗರ್ಭಗೃಹದಲ್ಲಿ ವೀರಭದ್ರೇಶ್ವರ ಮೂರ್ತಿ ಸ್ಥಾನಿಕ ಭಂಗಿಯಲ್ಲಿದೆ. ಕಪ್ಪು ಶಿಲೆಯನ್ನು ಬಳಸಿ ಶಿಲ್ಪವನ್ನು ಕೆತ್ತಿದ್ದಾರೆ. ಅರ್ಧ ಉಬ್ಬು ಶಿಲ್ಪ ಹೊಂದಿದ್ದು ಚತುರ್ಭುಜ ಹೊಂದಿದೆ. ಶಿರಕ್ಕೆ ಕಿರೀಟ, ಮುಕುಟ, ಕೊರಳಲ್ಲಿ ಹಾರ, ಕೈಗಡಗ, ಕಾಲ್ಗಡಗ ಹಾಗೂ ಕಂಠಪಟ್ಟಿ ಧರಿಸಿದ್ದು ರೌದ್ರಾವತಾರ ತಾಳಿದಂತೆ ಕಾಣುತ್ತದೆ. ಈ ಮೂರ್ತಿ ಬಲಭಾಗದಲ್ಲಿ ಕುಳಿತಭಂಗಿಯಲ್ಲಿಯ ಹುಲ್ಲೇಶ್ವರ ಮೂರ್ತಿ ಇದೆ. ಇದು ಕಪ್ಪುಶಿಲೆಯಾಗಿದೆ. ಹಾಗೂ ಹುಲ್ಲೇಶ್ವರ ದೇವಸ್ಥಾನದ ಆವರಣದಲ್ಲಿ ಬಿಡಿಶಿಲ್ಪಗಳಿಂದ ಅನೇಕ ಶಿಲ್ಪಗಳನ್ನು ರಚಿಸಲಾಗಿದೆ. ದೇವಾಲಯ ಎಡ ಹಾಗೂ ಬಲಭಾಗದಲ್ಲಿ ಎರಡು ವೀರಗಲ್ಲುಗಳು ನವಗ್ರಹಶಿಲ್ಪಗಳು, ನರ್ತಕಿಯರ ಶಿಲ್ಪಗಳು, ಮಹಾಸತಿಗಲ್ಲು, ನಿಷಿಧಿಗಲ್ಲುಗಳನ್ನು ಕಾಣಬಹುದು.

**ವೀರಗಲ್ಲಿನ ದೃಶ್ಯ ವಿವರಣೆ :**

| | | |
|---|---|---|
| ಗ್ರಾಮ | : | ಗೂಡೂರ |
| ಕಾಲ | : | ೧೦ನೇ ಶತಮಾನ |

ಶಿಲ್ಪ : ವೀರಗಲ್ಲು

ಸ್ಥಳ : ಹುಲ್ಲೇಶ್ವರ ದೇವಾಲಯ ಎಡಭಾಗ

ಶಿಲೆ : ಹಸಿರಶಿಲೆ

ಸ್ಥಿತಿ : ಸುಸ್ಥಿತಿ

ಸ್ಮಾರಕ ಶಿಲೆಗಳಿಗೆ ಸಂಬಂಧಿಸಿದಂತೆ ವೀರಗಲ್ಲುಗಳು ಹುನಗುಂದ ಪ್ರದೇಶದ ವೀರ ಪರಂಪರೆಯನ್ನು ಪ್ರತಿನಿಧಿಸುತ್ತವೆ. ಅಪರೂಪದ ರಣರಂಗಚಿತ್ರ ಅದಕ್ಕೆ ಪೂರಕವಾದ ಸಾಧನ ಸಾಮುಗ್ರಿಗಳು ವಿವರವನ್ನ ಒದಗಿಸುತ್ತವೆ. ಈ ಕಲ್ಲಿನ ಮೇಲಿರುವ ಶಿಲ್ಪಗಳು ಪರಾಕ್ರಮದ ಸಂಕೇತದಂತೆ ತೋರುತ್ತವೆ. ಈ ವೀರಗಲ್ಲು ಮೂರು ಪಟ್ಟಿಯನ್ನು ಹೊಂದಿದೆ.

**ಮೊದಲನೆ ಪಟ್ಟಿ :** ಕೆಳಗಿನ ಪಟ್ಟಿಯಲ್ಲಿ ನಾನುಕ ಹಾಗೂ ವಿರೋಧಿಗಳು ಯುದ್ದದಲ್ಲಿ ಕಾದಾಡುತ್ತಿರುವ ದೃಶ್ಯ ಅವರ ಕೈಯಲ್ಲಿ ಬಿಲ್ಲುಬಾಣ, ಗುರಾಣಿ, ಗಧೆ, ಖಡ್ಗ ಹಿಡಿದು ಯುದ್ದ ಮಾಡುವ ದೃಶ್ಯ ಇರುತ್ತದೆ.

**ಎರಡನೇ ಪಟ್ಟಿ :** ಮಧ್ಯದ ಪಟ್ಟಿಯಲ್ಲಿ ಯುದ್ಧದಲ್ಲಿ ಸಾವನೊಪ್ಪಿದ ವೀರನನ್ನು ನಾಲ್ಕು ಅಪ್ಸಯರು ವಿಮಾನದಲ್ಲಿಟ್ಟುಕೊಂಡು ಕೊಂಡೊಯ್ಯುತ್ತಿರುವ ದೃಶ್ಯವಿದೆ.

**ಮೂರನೇ ಪಟ್ಟಿ :** ಮೇಲಿನ ಪಟ್ಟಿಯಲ್ಲಿ ಇಬ್ಬರು ಸ್ತ್ರೀಯರು, ಪೂಜೆ ಮಾಡುತ್ತಿರುವ ದೃಶ್ಯ. ಶಿವಲಿಂಗದ ಎಡ ಮತ್ತು ಬಲಭಾಗದಲ್ಲಿ ಕೈಮುಗಿದು ಕುಳಿತ್ತಿರುವ ಚಿತ್ರವಿದೆ. ಅಂದರೆ ವೀರನು ಯುದ್ಧದಲ್ಲಿ ಸಾವನೊಪ್ಪಿ ಲಿಂಗೈಕ್ಯದ ದೃಶ್ಯವೆಂದು ಕಂಡುಬರುತ್ತದೆ.

**ಮಾಸ್ತಿಗಲ್ಲು ವಿವರಣೆ :**

ಹುಲ್ಲೇಶ್ವರ ದೆವಸ್ಥಾನದ ಎಡಭಾಗದಲ್ಲಿ ದುಸ್ಥಿತಿಯಲ್ಲಿರುವ ಬಿಳಿ ಉಸುಕು ಮಿಶ್ರಿತ ಕಲ್ಲುಗಳಿಂದ ರಚಿತವಾದ ಮಹಾಸತಿಗಲ್ಲು ಇದೆ. ಎತ್ತರ ೪೫ ಸೆಂ.ಮೀ. ಅಗಲ ೬೦ ಸೆಂ.ಮೀ ಇರುವ ಈ ಶಿಲ್ಪವು ಕನ್ನಡನಾಡಿನ ಮಹಾಸಾಧ್ವಿಯರ ಸ್ಮರಣೆಗಾಗಿ ನೆಟ್ಟವುಗಳಾಗಿವೆ. ಒಂದು ಸ್ತಂಭದ ಆಕೃತಿ ! ಆ ಸ್ತಂಭದ ಮಧ್ಯದಿಂದ ಹೊರಚಾಚಿ ಮೇಲಕ್ಕೆತ್ತದಂತಿರುವ ಒಂದು ತೋಳಿನ ಚಿತ್ರ; ಅದರ ಕೈಯಲ್ಲಿ ಹೆಬ್ಬರಳು ಮತ್ತು ತೋರುಬೆರಳುಗಳ ಮಧ್ಯದಲ್ಲಿ ಒಂದು ನಿಂಬೆಯ ಹಣ್ಣು; ಈ ಕೈಯಬಲ ಭಾಗದಲ್ಲಿ ಪುರುಷ ಮತ್ತು ಸ್ತ್ರೀ ವಿಗ್ರಹಗಳು ಅದರ ಪಕ್ಕದಲ್ಲಿ ಒಂದು ಶಿವಲಿಂಗವಿದೆ. ಇದೊಂದು ಉಬ್ಬುಶಿಲ್ಪವಾಗಿದೆ.

# ೩ - ಚಿತ್ತವಾಡಗಿ

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ಹುನಗುಂದ- ಇಲಕಲ್ |
| ತಾಲೂಕ | : | ಹುನಗುಂದ | ಜನಸಂಖ್ಯೆ | : | ೧೦೦೦ |
| ಗ್ರಾಮ | : | ಚಿತ್ತವಾಡಗಿ | ಹೋಬಳಿ | : | ಹುನಗುಂದ |

**ಸ್ಥಳ : ಪರಿಚಯ :**

ಇದು ಹುನಗುಂದ ತಾಲೂಕು ಸ್ಥಳದಿಂದ ದಕ್ಷಿಣಕ್ಕೆ ೬ ಕಿ.ಮೀ ದೂರದಲ್ಲಿದೆ. ಈ ಗ್ರಾಮಕ್ಕೆ ಬಸ್ಸಿನ ಸೌಕರ್ಯವಿರುತ್ತದೆ. ಇಲ್ಲಿ ಪ್ರಾಚೀನ ದೇವಾಲಯಗಳು, ಕೋಟೆಗಳು, ಶಾಸನಗಳು ಈ ಊರಿನ ಇತಿಹಾಸನವನ್ನು ತಿಳಿಸುತ್ತವೆ. ಸರಕಾರಿ ಕನ್ನಡ ಶಾಲೆ, ಮಠಗಳು ಇರುತ್ತವೆ. ಈ ಗ್ರಾಮವು ಕಪ್ಪು ಮಿಶ್ರ ಭೀಮಿಯನ್ನು ಹೊಂದಿದೆ. ಎತ್ತರವಾದ ನೈಸರ್ಗಿಕ ದಿಬ್ಬಗಳಿವೆ. ವ್ಯವಸಾಯ ಅವಲಂಬಿತವಾದ ಈ ಗ್ರಾಮವು ಬಾವಿಯ, ಬೋರವೆಲ್, ಅನುಕೂಲದಿಂದ ಸಾಗುವಳಿ ಮಾಡುತ್ತಾರೆ. ಈ ಊರಿನ ನೈರುತ್ಯಕ್ಕೆ ಜಕ್ಕೇನಹಳ್ಳ ಹರಿಯುತ್ತದೆ. ಗೋಧಿ, ಕಡಲೆ, ಬಿಳಿಜೋಳ, ಹತ್ತಿ ಶೇಂಗಾ, ಈರುಳ್ಳಿ ಮುಂತಾದ ಬೆಳೆಯನ್ನು ಬೆಳೆಯುತ್ತಾರೆ. ಊರ ಸುತ್ತಮುತ್ತ ಹುಣಸೆಮರ, ಬೇವಿನಮರ ಮಾವಿನಮರ ಕಾಣಬಹುದು.

**ಸ್ಥಳ ಐತಿಹ್ಯ :**

ಈ ಗ್ರಾಮದಲ್ಲಿ ಕಲ್ಮೇಶ್ವರ ದೇವಾಲಯ ಇರುವದರಿಂದ ಇದಕ್ಕೆ ಕಲೆದುಳಯೆಂದು ಕರೆಯುತ್ತಿದ್ದರು. ಆದರೆ ಆ ದೇಬಾಲಯ ಬಿಟ್ಟು ಮತ್ತೊಂದು ಗ್ರಾಮ ವಿಕಾಸಹೊಂದಿತು. ಹೀಗಾಗಿ -ಕಲೆದಾಳ-ಬದಲಾಗಿ ಚಿತ್ತದಗಿ-ಚಿತ್ತವಾಗಿ "ಚಿತ್ತವಾಡಗಿ" ಯಾಗಿ ಪರಿವರ್ತನೆಯಾಯಿತು ಎಂಬುದು ಗ್ರಾಮದ ಜನಪದ ಮೂಲವಾಗಿದೆ.

**ವಾಸ್ತುಶಿಲ್ಪ ಕಲೆ :**

ಚಿತ್ತವಾಡಗಿ ಗ್ರಾಮದಲ್ಲಿ ಮೂರು ದೇವಾಲಯಗಳು ಇವೆ. ಅವುಗಳಲ್ಲಿ ಕಲ್ಲಪ್ಪನಗುಡಿ ಹಾಗೂ ಬಸವಣ್ಣ ಮತ್ತು ಮಾರುತಿ ಜೋಡಿ ದೇವಾಲಯಗಳು ಪ್ರಾಚೀನ ದೇವಾಲಯವಾಗಿವೆ. ವೀರಭದ್ರೇಶ್ವರ ದೇವಾಲಯವು ಇತಿತ್ತಲಾಗಿ ನಿರ್ಮಾಣವಾದ ದೇಗುಲವಾಗಿದೆ. ಈ ದೇಗುಲಗಳ ಕಟ್ಟಡ ವಾಸ್ತು ಚಾಲುಕ್ಯ ಶೈಲಿಯನ್ನೆ ಹೊಂದಿವೆ. ಸರಳವಾದ ಅಲಂಕಾರರಹಿತ ವಾಸ್ತುವನ್ನು ಹೊಂದಿವೆ. ಈ ದೇವಾಲಯಗಳಿಗೆ ಶಿಖರವಿರದೆ ಚೌಕಾಕಾರವಾದ ವಿನ್ಯಾಸವನ್ನು ಹೊಂದಿದೆ.

| | | | |
|---|---|---|---|
| **1)** | **ದೇವಾಲಯ** | : | **ಕಲ್ಮೇಶ್ವರ ದೇವಾಲಯ** |
| | ಮೂರ್ತಿ | : | ವಿಷ್ಣು |
| | ದಿಕ್ಕು | : | ಪೂರ್ವಾಭಿಮುಖ |
| | ಕಾಲ | : | ೧೧ನೇ ಶತಮಾನ |
| | ಶೈಲಿ | : | ಚಾಲುಕ್ಯಶೈಲಿ |
| | ಸ್ವರೂಪ | : | ಸಮ ಉಬ್ಬು ಶಿಲ್ಪ |
| | ಸ್ಥಿತಿ | : | ದುಸ್ಥಿತಿ |

ಶಿಲೆ : ಗ್ರ್ಯಾನೈಟ್
ಭಂಗಿ : ನಿಂತ ಭಂಗಿ
ಸ್ಥಳ : ಗರ್ಭಗೃಹ
ಅಳತೆ : ಎತ್ತರ : ೬೫ ಸೆಂ.ಮೀ
ಅಗಲ : ೨೦ ಸೆಂ.ಮೀ
ಸ್ಥಿತಿ : ದುಸ್ಥಿತಿ

**ಮೂರ್ತಿಯ ವೈಶಿಷ್ಟ :**

ಚಿತ್ತವಾಡಗಿ ಚಿಕ್ಕ ಹಳ್ಳಿಯಾದರೂ ಇಲ್ಲಿ ಕಂಡು ಬರುವ ಕಲ್ಲಪ್ಪನ ಗುಡಿಯು ೧೧ನೇ ಶತಮಾನಕ್ಕೆ ಸೇರಿದ್ದರಬಹುದು. ಈ ದೇವಾಲಯ ಸರಳವಾದ ಅಲಂಕಾರರಹಿತ ದೇಗುಲವಾಗಿದ್ದು ಈ ದೇಗುಲದ ಮುಖ ಮಂಟಪದಲ್ಲಿ ಸ್ತಂಭಗಳು ಗರ್ಭಗೃಹದಲ್ಲಿ ೪ ಸ್ಥಂಭಗಳಿವೆ. ದ್ವಾರ ಬಂಧದ ಕೆಳಗಡೆ ದ್ವಾರಪಾಲಕರು ಲತಾಶಾಖಸ್ತಂಭ ಶಾಖ ಪುಷ್ಪ ಶಾಖ ಇಲ್ಲಿ ನೋಡಬಹುದು. ದೇವಾಲಯದ ದ್ವಾರಬಂಧದಲ್ಲಿ ಗಜಲಕ್ಷ್ಮೀಯನ್ನು ಕಾಣಬಹುದು.

ಈ ದೇವಾಲಯದ ಗರ್ಭಗೃಹದ ಚೌಕಾಕಾರವಾದ ಪೀಠದ ಮೇಲೆ ಕಪ್ಪು ಶಿಲೆಯ ಸಮಬಾಹುವುಳ್ಳ ವಿಷ್ಣುವಿನ ಮೂರ್ತಿ ಇದೆ. ಇದು ನಿಂತ ಭಂಗಿಯಲ್ಲಿದ್ದು, ಈ ಮೂರ್ತಿಗೆ ಸಾಕಷ್ಟು ಎಣ್ಣೆಯನ್ನು ಹೊಯ್ಯಲಾಗಿರುವದರಿಂದ ಅಸ್ಪಷ್ಟವಾಗಿ ಕಾಣುತ್ತದೆ.

ವಿಷ್ಣು ಚತುರ್ಥ ಜನಾಗಿದ್ದು ಆದಿಶೇಷನ ಪ್ರಭಾವಳಿ ಇದೆ. ಶಿರಕ್ಕೆ ಕಿರೀಟ, ಮುಕುಟ, ಕೊರಳಲ್ಲಿ ಹಾರ, ಬಲಗೈ ಮೇಲಿನ ಕೈಯಲ್ಲಿ ಶೂಲ ಕೆಳಗಿನ ಕೈಯಲ್ಲಿ ಗದೆ, ಡೆಗೈಯಲ್ಲಿ ಶಂಖ, ಹಾಗೂ ಪದ್ಮ ಇರುತ್ತದೆ. ನಡಪಟ್ಟಿ ಕಾಲಲ್ಲಿ ಕಾಲ್ಗಡಗ, ಕೈಯಲ್ಲಿ ಕೈಗಡಗ ಧರಿಸಿ ಈ ವಿಷ್ಣುವಿನ ಮೂರ್ತಿಯು ಅಳಂಕೃತವಾಗಿದೆ.

**ಮೂರ್ತಿಯ ಆಭರಣಗಳು :**

ಶಿರಕ್ಕೆ ಕಿರೀಟ, ಮುಕುಟ, ಕೊರಳಿಗೆ ಹಾರ, ಕೈಗಡ್ಗ, ಕಾಲ್ಗಡಗ, ಕರ್ಣಕುಂಡಲ, ವಸ್ತ್ರಭರಣ ಧರಿಸಿದ್ದಾನೆ.

**ಆಯುಧ :-** ಶೂಲ, ಗದೆ, ಶಂಖ, ಪಾನಪಾತ್ರೆ, ಆಯುಧಗಳನ್ನು ಧರಿಸಿದ್ದಾನೆ.

೨. ದೇವಾಲಯ : ಬಸವಣ್ಣ ದೇವಾಲಯ
ಶಿಲ್ಪ : ನಂದಿವಿಗ್ರಹ
ಭಂಗಿ : ಕುಳಿತಭಂಗಿ
ದಿಕ್ಕು : ದಕ್ಷಿಣಾಭಿಮುಖ
ಕಾಲ : ೧೧ನೇ ಶತಮಾನ
ಶಿಲೆ : ಕಪ್ಪುಶಿಲೆ
ಸ್ಥಳ : ಗರ್ಭಗೃಹ
ಅಳತೆ : ಎತ್ತರ - ೫೭ ಸೆಂ.ಮೀ
ಅಗಲ - ೬೪ ಸೆಂ.ಮೀ.
ಸ್ಥಿತಿ : ಸುಸ್ಥಿತಿ

**ಶಿಲ್ಪದ ವೈಶಿಷ್ಟ್ಯ :**

ಸರಳವಾದ ವಾಸ್ತುವನ್ನು ಹೊಂದಿದ ಈ ದೇಗುಲ ಎರಡು ಚೌಕಾಕಾರವಾದ ಗರ್ಭಗೃಹ ಹೊಂದಿದೆ. ಬಲಗರ್ಭಗೃಹದಲ್ಲಿ ಆಂಜನೇಯ ಮೂರ್ತಿ ಎಡಭಾಗ ಗರ್ಭಗೃಹದಲ್ಲಿ ನಂದಿವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯದ ವರಾಂಡವು ಸುತ್ತು ಚೌಕಾಕಾರವಾದ ಕಟ್ಟಡವನ್ನು ಹೊಂದಿದ್ದು ಬಲಭಾಗದ ಮಾರುತಿ ಗರ್ಭಗೃಹದ ಪಾರ್ಶ್ವದಲ್ಲಿ ನಿಲುಸುಗಂಭದಲ್ಲಿ ವಿಷ್ಣುವಿನ ಚಿತ್ರವಿರುವ ಒಂದು ಅಸ್ಪಷ್ಟ ಶಾಸನವಿದೆ.

ಎತ್ತರವಾದ ವೃತ್ತಾಕಾರದ ಪೀಠದ ಮೇಲೆ ನಂದಿವಿಗ್ರಹವು ಕುಳಿತಭಂಗಿಯಲ್ಲಿದೆ. ಎಡಗಾಲನ್ನು ಉದರದಲ್ಲಿಟ್ಟುಕೊಂಡು ಬಲಗಾಲನ್ನು ಮುಂಚಾಚಿದೆ. ಹಣೆಗೆ ಹಣೆಪಟ್ಟ- ಕೊರಳಿಗೆ ಗಗರಿಸರ, ಕೊರಳಗೆಜ್ಜೆ, ಕಾಲ್ಗಡಗ, ಕೊಂಬುಣದ ಧರಿಸಿ ದಕ್ಷಿಣಾಭಿಮುಖವಾಗಿ ಕುಳಿತುಕೊಂಡಿದೆ.

**ವಿಗ್ರಹದ ಆಭರಣಗಳು :**

ಕಪ್ಪು ಶಿಲೆಯಲ್ಲಿರುವ ಈ ನಂದಿವಿಗ್ರಹವು ಹಣೆಗೆ ಹಣೆಪಟ್ಟ, ಕೊರಳಲ್ಲಿ ಗೆಜ್ಜೆಸರ, ಚಿಕ್ಕಘಂಟೆ, ಕೊಂಬಿಗೆ ಕೊಂಬಣಸ್, ಕಾಲಲ್ಲಿ ಕಾಲ್ಗಡಗ ಇವು ನಂದಿಯ ಸೌಂದರ್ಯವನ್ನು ಹೆಚ್ಚಿಸಿವೆ.

| | | | |
|---|---|---|---|
| **3.** | **ದೇವಾಲಯ** | : | **ಆಂಜನೇಯ ದೇವಸ್ಥಾನ** |
| | ಮೂರ್ತಿ | : | ವೀರಾಂಜನೇಯ |
| | ಭಂಗಿ | : | ದ್ವಿಭಂಗಿ |
| | ದಿಕ್ಕು | : | ದಕ್ಷಿಣಾಭಿಮುಖ |
| | ಕಾಲ | : | ೧೧ನೇ ಶತಮಾನ |
| | ಸ್ವರೂಪ | : | ಸಮ ಉಬ್ಬುಶಿಲ್ಪ |
| | ಸ್ಥಳ | : | ಗರ್ಭಗೃಹ |
| | ಅಳತೆ | : | ಎತ್ತರ - ೯೦ ಸೆಂ.ಮೀ |
| | | | ಅಗಲ -೫೮ ಸೆಂ.ಮೀ. |
| | ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯ :**

ಚಿತ್ತವಾಡಗಿ ಗ್ರಾಮದ ಊರು ಒಳಗೆ ಇರುವ ಈ ದೇಗುಲ ಬಸವಣ್ಣಗುಡಿಯ ಬಲಭಾಗದಲ್ಲಿದೆ. ಇವರೆರಡು ದೇಗುಲ ಒಂದೊಕ್ಕೊಂದು ಹತ್ತಿಕೊಂಡಿವೆ. ಈ ಗರ್ಭಗೃಹದಲ್ಲಿ ಏಕಶಿಲೆಯ ವೀರಾಂಜನೇಯ ಮೂರ್ತಿಯು ದ್ವಿಭಂಗಿಯಲ್ಲಿದೆ. ದ್ವಿಭುಜವನ್ನು ಹೊಂದಿರುವ ಈ ಮೂರ್ತಿಯು ಬಲ ಬಲಗೈಯನ್ನು ಅಭಯ ಹಸ್ತ ಮಾಡಿದ್ದಾನೆ.

ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ಉದ್ದವಾದ ಬಾಲವಿದೆ. ಇದು ಸುತ್ತವರಿಯಲ್ಪಟ್ಟಿದೆ. ಈ ಮೂರ್ತಿಯ ಪೂರ್ವಾಭಿಮುಖವಾಗಿದೆ.

ಚಿಕ್ಕಗ್ರಾಮವಾದರು ಚೊಕ್ಕವಾಗಿ ತನ್ನ ಇತಿಹಾಸವನ್ನು ಕಾಪಾಡಿಕೊಂಡು ಬಂದಿರುವ ಚಿತ್ತವಾಡಗಿ ಮೂರ್ತಿಶಿಲ್ಪದ ವೈಶಿಷ್ಟ್ಯ ಅಪೂರ್ವವಾದು. ಹೆಚ್ಚಾಗಿ ಮೂರ್ತಿಗಳು ಕಪ್ಪುಶಿಲೆಯಲ್ಲಿ ಶಿಲ್ಪಿಸಿದ್ದರಿಂದ ನಯನತೆ ಹೆಚ್ಚು ಕಂಡು ಬರುತ್ತದೆ. ಸರಳವಾದ ವಾಸ್ತು ಸ್ವರೂಪದಲ್ಲಿ ಮೂರ್ತಿಗಳ ಪ್ರತಿಷ್ಠಾಪನೆ ಗಮನಾರ್ಹವಾದು. ವಿಷ್ಣುಮೂರ್ತಿ, ಆಂಜನೇಯ, ನಂದಿವಿಗ್ರಹ ಸರಳ ಅಲಂಕಾರದಿಂದ ಕೂಡಿವೆ.

# ೪ - ಸೂಳೆಬಾವಿ

ಜಿಲ್ಲೆ : ಬಾಗಲಕೋಟ

ತಾಲೂಕು : ಹುನಗುಂದ

ಗ್ರಾಮ : ಸೂಳೆಬಾವಿ

ಹೋಬಳಿ : ಅಮೀನಗಡ

ಮಾರ್ಗ : ಬದಾಮಿ-ಅಮೀನಗಡ

ಜನವಸತಿ : ೧೬,೦೦೦

**ಸ್ಥಳ ಪರಿಚಯ :**

ಅಮೀನಗಡದಿಂದ ಐಹೋಳೆಗೆ ಹೋಗುವ ಮಾರ್ಗದಲ್ಲಿ ಸುಮಾರು ಎರಡು ಕಿ.ಮೀ. ಅಂತರದಲ್ಲಿದೆ. ಇದು ನೇಕಾರಿಕೆಗೆ ಪ್ರಸಿದ್ಧಿ ಹೊಂದಿದೆ. ಇಲ್ಲಿಯ ಶಾಸನಗಳು, ಕೋಟೆಗೋಡೆಗಳು, ದೇವಾಲಯಗಳು ಈ ಊರಿನ ಐತಿಹಾಸಿಕ ಹಿನ್ನಲೆಯ ಮೇಲೆ ಬೆಳಕು ಚೆಲ್ಲುತ್ತವೆ.

ಭಾರತ ಹುಣ್ಣಿಮೆಯ ದಿವಸ ಬನಶಂಕರಿ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಜನಪದ ನೃತ್ಯ, ಕೋಲಾಟ, ನಾಟಕ, ಮುಂತಾದ ಕಲೆಯನ್ನು ಇಲ್ಲಿ ಜನರು ಪ್ರದರ್ಶಿಸುತ್ತಾರೆ. ಹೀಗೆ ಸೂಳೆಬಾವಿ ಗ್ರಾಮವು ಪ್ರಸಿದ್ಧಿ ಹೊಂದಿದೆ.

**ಸ್ಥಳ ಐತಿಹ್ಯ :**

ಇಲ್ಲಿ ವೇಶ್ಯೆಯೊಬ್ಬಳು ಒಂದು ದೇಗುಲವನ್ನು ಕಟ್ಟಿಸಿದಳು ಹಾಗೂ ಒಂದು ಬಾವಿನಿರ್ಮಾಣ ಅಸು ಸೂಳೆಗುಡಿಯೆಂದು ಹೆಸರಾಯಿತು. ಕ್ರಮೇಣ ಸೂಳೆಗುಡಿ ಹೋಗಿ ಸೂಳೆಬಾವಿಯಾಗಿ ಪರಿವರ್ತನೆಯಾಯಿತು. ಎಂಬುದು ಈ ಊರಿನ ಜನರ ಹೇಳಿಕೆಯಾಗಿದೆ.

**ವಾಸ್ತುಶಿಲ್ಪ ಕಲೆ :**

ಸೂಳೆಬಾವಿಯಲ್ಲಿ ಎರಡು ಪ್ರಸಿದ್ಧ ದೇವಾಲಯಗಳಿವೆ. ಅವುಗಳೆಂದರೆ ಅಂಬಾಭವಾನಿ ದೇವಾಲಯ, ಸೂಳೇಶ್ವರ ದೇವಾಲಯ ಪ್ರಸಿದ್ಧಿ ಪಡೆದಿವೆ. ಇವುಗಳ ವಾಸ್ತು ಕಲೆ ಬದಾಮಿ ಚಾಲುಕ್ಯರ ಶೈಲಿಯನ್ನು ಹೊಂದಿವೆ.

| | | |
|---|---|---|
| **1.ದೇವಾಲಯ** | : | **ಸೂಳೇಶ್ವರ ದೇವಾಲಯ** |
| ಶಿಲ್ಪ | : | ಈಶ್ವರಲಿಂಗ |
| ದಿಕ್ಕು | : | ದಕ್ಷಿಣಾಭಿಮುಖ |
| ಕಾಲ | : | ೧೦ನೇ ಶತಮಾನ |
| ಶಿಲೆ | : | ಕಪ್ಪು |
| ಸ್ಥಳ | : | ಗರ್ಭಗೃಹ |
| ಶೈಲಿ | : | ಚಾಲುಕ್ಯರ ಶೈಲಿ |
| ಅಳತೆ | : | ಲಿಂಗದ ಎತ್ತರ - ೭೫ ಸೆಂ.ಮೀ |
| | | ಅಗಲ - ೬೦ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಅಂಗದ ವಿವರಣೆ :**

ಇಂಗ್ಲೀಷ 'T' ಆಕಾರದ ವಿನ್ಯಾಸವುಳ್ಳ ಮೆಟ್ಟಿಲುಗಳುಳ್ಳ ಬಾವಿಯ ಮುಂದೆ ದಕ್ಷಿಣಾಭಿಮುಖವಾಗಿ ಪ್ರತೋಳಿ ನಿಂತಿದೆ. ೧೯೫೦ರಲ್ಲಿ ಸೂಲೇಶ್ವರ (ಶೂಲೇಶ್ವರ) ಎಂಬ ಹೆಸರಿನ ಅಂಶವನ್ನು ಪ್ರತಿಷ್ಠಾಪಿಸಿದ ವಿಷಯ ಕಂಬದ ಮೇಲಿನ ಶಾಸನದಿಂದ ತಿಳಿಯುತ್ತದೆ. ಇದಕ್ಕೆ ಎರಡು ಭಾಗಗಳು ಮುಂದೆ ತೆರೆದ ಮುಖ ಮಂಟಪ ಮತ್ತು ಅದಕ್ಕೆ ಹೊಂದಿಕೊಂಡು ಮುಚ್ಚಿರುವ (ಗೋಡೆಗಳಿರುವ) ಮಂಟಪ, ರುಚಕ, ಮಾದರಿಯ (ಚೌಕವಿನ್ಯಾಸದ) ಕಂಬಗಳು ಅವುಗಳ ಮೇಲಿನ ಕೆತ್ತನೆ, ಮಂಟಪದ ದ್ವಾರಬಂಧದ ರಚನೆ ಮತ್ತು ಕೆತ್ತನೆ (ಉದಾ- ಗರುಡ-ನಾಗಶಾಖೆಯ ಬಳಕೆ) ಮಂಟಪದ ಗೋಡೆ-ಕಂಬಗಳ ಮೇಲಿನ ಲಿಪಿಲಕ್ಷಣ ಇವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಇದು ನಿಸ್ಸಂಶಯವಾಗಿ ಬದಾಮಿಯ ಚಾಲುಕ್ಯರ ಆಡಳಿತದ ಉತ್ತರಾರ್ಧದಲ್ಲಿ ನಿರ್ಮಿತವಾದ ಕಟ್ಟಡವೆಂಬುದು ಸುಸ್ಪಷ್ಟವಾಗುತ್ತದೆ.

ಸೋಲೇಶ್ವರ ದೇಗುಲದ ಗರ್ಭಗೃಹದ ಎತ್ತರವಾದ ಚೌಕಾಕಾರದ ಪೀಠದ ಮೇಲೆ ಲಿಂಗವನ್ನು ಸ್ಥಾಪಿಸಲಾಗಿದೆ. ಇದರ ಜಲಹರಿಯು ಉತ್ತರಾಭಿಮುಖವಾಗಿದೆ. ಈ ಲಿಂಗ ವೃತ್ತಾಕಾರವಾಗಿದೆ. ಕಪ್ಪು ಶಿಲೆಯನ್ನು ಹೊಂದಿದೆ.

| | | |
|---|---|---|
| **೨. ದೇವಾಲಯ** | : | **ಅಂಬಾಭವಾನಿ** |
| ಮೂರ್ತಿ | : | ಅಂಬಾಭವಾನಿ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೧ ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಶೈಲಿ | : | ಚಾಲುಕ್ಯರ ಶೈಲಿ |
| ಅಳತೆ | : | ಲಿಂಗದ ಎತ್ತರ - ೬೨ ಸೆಂ.ಮೀ<br>ಅಗಲ - ೫೬ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವಿವರಣೆ :**

ಈ ದೇವಾಲಯದ ಗರ್ಭಗೃಹದ ವೃತ್ತಾಕಾರ ಪೀಠದ ಮೇಲೆ ಶಿಲ್ಪಿಸಲಾಗಿದೆ. ಈ ಮೂರ್ತಿಯು ಕಪ್ಪು ಶಿಲೆಯಾಗಿದೆ. ಅಂಬಾಭವಾನಿ ಮೂರ್ತಿಯು ನಿಂತಭಂಗಿಯಲ್ಲಿದೆ. ಮೂರ್ತಿಗೆ ನಯವಾದ ಮೆರಗು ನೀಡಿದ್ದಾರೆ. ಹಿಂದೆ ಪ್ರಭಾವಳಿ ಇದೆ. ಅಂಬಾಭವಾನಿ ಮೂರ್ತಿಗೆ ಎರಡು ಕೈಗಳಿದ್ದು ಬಲಗೈಯಲ್ಲಿ ಶಂಖ ಎಡಗೈಯನ್ನು ಅಭಯಹಸ್ತ ಮಾಡಿದ್ದಾಳೆ. ಶಿರಕ್ಕೆ ಕಿರೀಟ, ಮುಕುಟ, ಕೊರಳಿಗೆ ಕಂಠಹಾರ, ಮೂಗುತಿ, ಕೈಗೆ ಕೈಬಳೆ, ಕಾಲ್ಗಡಗ ಧರಿಸಿ ಈ ಮೂರ್ತಿಯ ಆಭರಣಗಳಿಂದ ಅಲಂಕೃತಗೊಂಡಿದೆ. ಈ ದೇಗುಲ ೧೨ ಸ್ತಂಭಗಳನ್ನು ಹೊಂದಿದೆ. ಹಾಗೂ ಗರ್ಭಗೃಹದ ದ್ವಾರಬಂದದ ಬಲಭಾಗದ ಅರ್ಧಗಂಭದಲ್ಲಿ ಒಂದು ಶಾಸನವಿದೆ. ಇದು ೧೧೮೬-೮೭ ನೇ ಕಾಲಮಾನ ಹೊಂದಿದ್ದು ಸಿಂಘ, ಬಿಜ್ಜಳ, ವಿಕ್ರಮಾದಿತ್ಯ ಅರಸಿಯ ಬೀದಿನಲ್ಲಿಯ ಕೇಶವ ದೇವಾಲಯದ ಬ್ರಾಹ್ಮಣರ ಆಹಾರಕ್ಕಾಗಿ ಅರಸು ಹಾಗೂ ವೀರವಿಕ್ರಮಾದಿತ್ಯರಿಂದ ಭೂದಾನ ಬಗ್ಗೆ ತಿಳಿಸುತ್ತದೆ.

**ಮೂರ್ತಿಯ ಆಭರಣಗಳು :**

ಶಿರಕ್ಕೆ ಕಿರೀಟ, ಮುಕುಟ, ಕೊರಳಿಗೆ ಕಂಠಹಾರ, ಸೊಂಟಕ್ಕೆ ಗಗರಿಸರ, ಮೂಗುತಿ, ಕೈಬಳೆ, ಕಾಲ್ಗಡಗ, ಕರ್ಣಕುಂಡಲ ಆಭರಣಗಳಿಂದ ತುಳಜಾಮೂರ್ತಿಯು ಸುಂದರವಾಗಿ ಕಾಣುತ್ತದೆ.

| | | |
|---|---|---|
| ೩.**ದೇವಾಲಯ** | : | **ಬನಶಂಕರಿ ದೇವಾಲಯ** |
| ಮೂರ್ತಿ | : | ಬನಶಂಕರಿ |
| ದಿಕ್ಕು | : | ಉತ್ತರಾಭಿಮುಖ |
| ಕಾಲ | : | ಆಧುನಿಕ ಕಾಲಮಾನ |
| ಶಿಲೆ | : | ಗ್ರಾನೈಟ್ |
| ಸ್ಥಳ | : | ಗರ್ಭಗೃಹ |
| ಭಂಗಿ | : | ಕುಳಿತ ಭಂಗಿ |
| ಅಳತೆ | : | ಎತ್ತರ - ೬೦ ಸೆಂ.ಮೀ |
| | | ಅಗಲ - ೩೩ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವಿವರಣೆ :**

ಈ ದೇವಾಲಯದ ಗರ್ಭಗೃಹದ ಚೌಕಾಕಾರದವಾದ ಎತ್ತರ ಪೀಠದ ಮೇಲೆ ಬನಶಂಕರಿ ಮೂರ್ತಿಯನ್ನು ಶಿಲ್ಪಿಸಲಾಗಿದೆ. ಇದು ಸಮ ಉಬ್ಬು ಶಿಲ್ಪವಾಗಿದೆ. ಕಪ್ಪು ಶಿಲೆಯಲ್ಲಿ ನಯವಾಗಿ ಈ ಮೂರ್ತಿಯು ಸುಂದರವಾಗಿ ಕಾಣುತ್ತದೆ. ಸಿಂಹಾಸನ ರೂಢವಾದ ಈ ಮೂರ್ತಿಯ ಹಿಂದೆ ಪ್ರಭಾವಳಿ ಇದೆ. ಈ ಮೂರ್ತಿಗೆ ಚತುರ್ಭುಜವಿದ್ದು ಬಲಗೈಯಲ್ಲಿ ತ್ರಿಶೂಲ, ಕತ್ತಿ, ಹಿಡಿದ್ದಾಳೆ. ಎಡಗೈಯಲ್ಲಿ ಅಭಯ ಹಸ್ತ, ಸಂಖ ಇರುತ್ತದೆ. ಸಿಂಹದ ಮೇಲೆ ಕುಳಿತಿರುತ್ತಾಳೆ. ಶಿರಕ್ಕೆ ಕಿರೀಟ ಮುಕುಟ, ಕೊರಳಿಗೆ ಕಂಠಹಾರ, ನಡಕ್ಕೆ ನಡುಪಟ್ಟಿ, ಕೈಗೆ ಬಳೆ, ಕಾಲ್ಗಡಗ ಧರಿಸಿದ್ದಾಳೆ. ಈ ದೇವಾಲಯದ ಜಾತ್ರೆಯು ಭಾರತ ಹುಣ್ಣಿಮೆಯ ದಿವಸ ಜರುತ್ತದೆ. ಈ ದೇವಾಲಯದ ಎದುರಿಗೆ ದೀಪಸ್ತಂಭ ಇರುತ್ತದೆ.

**ಮೂರ್ತಿಯ ಆಭರಣಗಳು :**

ಕಿರೀಟ, ಮುಕುಟ, ಕೊರಳಿಗೆ ಕಂಠಹಾರ, ನಡುಪಟ್ಟಿ, ಭಾಗಿಬಂಧ, ಕರ್ಣಕುಂಡಲ, ಕಾಲ್ಗಡಗ, ಕೈಗಡಗ, ಮೂಗುತಿ ಧರಿಸಿದ ಈ ಮೂರ್ತಿಯು ಸುಂದರವಾಗಿ ಕಾಣುತ್ತದೆ.

**ಸೂರ್ಯ ಮತ್ತು ಬ್ರಹ್ಮ ಪ್ರತಿಮೆಗಳು**

ಶೂಲೇಶ್ವರ ದೇವಾಲಯವು ಬದಾಮಿ ಚಾಲುಕ್ಯರ ಆಡಳಿತದ ಉತ್ತರಾರ್ಧದಲ್ಲಿ ನಿರ್ಮಿತವಾಗಿದೆ. ಈ ದೇವಾಲಯದ ದಕ್ಷಿಣಾದ್ವಾರಬಂಧ, ಮಂಟಪ ಮೇಲ್ಚಾವಣೆ, ಮಂಟಪದ ಉತ್ತರ ದ್ವಾರಬಂಧದಲ್ಲಿ ಮೂರ್ತಿಗಳು ಕೆತ್ತನೆಯ ಅಮೋಘವಾದದು ಹಾಗೂ ವಿಶಿಷ್ಟ್ಯ ಪೂರ್ಣವಾದದು.

೧. ಮಂಟಪದ ದಕ್ಷಿಣ ದ್ವಾರಬಂಧದ ಮೇಲ್ಗಡೆ ಕೂಟ-ಪಂಜರ-ಶಾಲಗಳಲ್ಲಿ ಚಿಕಣಿ ಪ್ರತಿಮೆಗಳಿವೆ. ಇವುಗಳಲ್ಲಿ ಮುಖ್ಯ (ಮಧ್ಯದ) ಚೈತ್ಯ ಕೂಡಿನಲ್ಲಿ ಸಮಪಾದದಲ್ಲಿರುವ ಸೂರ್ಯ ತನ್ನರೆಡು ಕೈಗಳಲ್ಲಿ ಪದ್ಮಧಾರಿಯಾಗಿ ನಿಂತಿದ್ದಾನೆ.

೨. ಮಂಟಪದ ಮೇಲ್ಛಾವಣಿಯಲ್ಲಿ ವರಾಹರೂಢ ವಿಷ್ಣು ( ದಕ್ಷಿಣ) ಹಂಸರೂಢ ಬ್ರಹ್ಮ (ಮಧ್ಯ) ಮತ್ತು ಕಾಲಾರಿಶಿವ ( ಉತ್ತರ) ಇವರ ಕೆತ್ತನೆಗಳಿವೆ.

೩. ಮಂಟಪದ ಉತ್ತರ ದ್ವಾರಬಂಧದಲ್ಲಿ ಮೇಲ್ಗಡೆ ವೃಷಭರೂಢ ಶಿವ, ಹಂಸರೂಢ ಬ್ರಹ್ಮ (ಮಧ್ಯ) ಗರುಡಾ ವಿಷ್ಣು ಇವರ ಶಿಲ್ಪ ಪಟ್ಟಿಕೆ ಇದೆ.

ಒಟ್ಟಿನಲ್ಲಿ ಆದಿತ್ಯ - ಬ್ರಹ್ಮರಿಗೆ ಈ ಇಮಾರತಿನಲ್ಲಿ ಪ್ರಮುಖ ಸ್ಥಾನ ಕಲ್ಪಿಸಲಾಗಿದೆ.

## ಮೂರ್ತಿಶಿಲ್ಪದ ವೈಶಿಷ್ಟ್ಯ :

ಸೂಳಿಭಾವಿಯ ದೇಗುಲಗಳ ಮೂರ್ತಿಶಿಲ್ಪವನ್ನು ಗಮನಿಸಿದಾಗ ನಮಗೆ ಸಾಕಷ್ಟು ವಿಶಿಷ್ಟವಾದ ಶಿಲ್ಪಕಲೆಗಳು ಕಂಡು ಬರುತ್ತವೆ. ಅಂಭಾಭವಾನಿ ಮೂರ್ತಿಯ ಶಿಲ್ಪವು ನಯವಾಗಿದ್ದು, ಸುಂದರವಾಗಿ ಶಿಲ್ಪಿಸಲಾಗಿದೆ. ಹಾಗೂ ಬನಶಂಕರಿ ಮೂರ್ತಿಯು ಸಮ ಉಬ್ಬು ಶಿಲ್ಪವಾಗಿದ್ದು ಈ ಮೂರ್ತಿಯು ಸಿಂಹದ ಮೇಲೇ ಕುಳಿತ ಭಂಗಿಯಲ್ಲಿರುವದು. ಇದು ಸುಂದರವಾಗಿ ಆಭರಣಗಳಿಂದ ಅಲಂಕೃತಗೊಂಡಿದೆ. ಶೂಲೇಶ್ವರ ದೇಗುಲದ ಶಿಲ್ಪ ಪಟ್ಟಿಕೆಗಳ ಕೆತ್ತನೆಯು ಅಮೋಘವಾಗಿದೆ. ಬದಾಮಿಯ ಚಾಲುಕ್ಯರ ಇಮಾರತುಗಳಲ್ಲಿ ತ್ರಿಮೂರ್ತಿಗಳಲ್ಲಿ ಬ್ರಹ್ಮನಿಗೆ ಮಧ್ಯದ ಅಂದರೆ ಮುಖ್ಯ ಸ್ಥಾನವನ್ನು ಕಲ್ಪಿಸಿರುವುದು ತೀರ ಅಪರೂಪ. ದಕ್ಷಿಣಾಭಿಮುಖವಾಗಿರುವ ದ್ವಾರಬಂಧದಲ್ಲಿ ಆದಿತ್ಯನಿಗೆ ಪ್ರಮುಖ ಸ್ಥಾನವನ್ನು ಕೊಟ್ಟಿರುವುದು ಗಮನಿಸಬೇಕಾದ ವಿಷಯವಾಗಿದೆ.

# ೫- ಹುನಗುಂದ

ಜಿಲ್ಲೆ : ಬಾಗಲಕೋಟ

ತಾಲೂಕು : ಹುನಗುಂದ

ನಗರ : ಹುನಗುಂದ

ಹೋಬಳಿ : ಹುನಗುಂದ

ಮಾರ್ಗ : ಬಿಜಾಪೂರ-ಬೆಂಗಳೂರು

ಜನವಸತಿ : ೩೦,೦೦೦

**ಸ್ಥಳ ಪರಿಚಯ :**

ಹುನಗುಂದ ಈ ತಾಲೂಕಿನ ಆಡಳಿತ ಕೇಂದ್ರ ಹಾಗೂ ಪಟ್ಟಣ. ಬಾಗಲಕೋಟ, ರಾಯಚೂರು ಮಾರ್ಗದಲ್ಲಿ ಬಾಗಲಕೋಟೆ ಆಗ್ನೇಯಕ್ಕೆ ೪೫ ಕಿ.ಮೀ. ದೂರದಲ್ಲಿ ಬಿಜಾಪೂರಕ್ಕೆ ೧೩೫ ಕಿ.ಮೀ. ದೂರದಲ್ಲಿ ಇದೆ. ಇಲ್ಲಿಯು ಒಂದು ಪುರಸಭೆ ಇದೆ. ಈ ನಗರದ ಜನಸಂಖ್ಯೆ : ೪೦,೦೦೦ ಇರುತ್ತದೆ

ಈ ಪಟ್ಟಣದಲ್ಲಿ ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳು ಅಂಚೆಕಛೇರಿ, ತಂತಿ ಕಛೇರಿ, ದೂರದರ್ಶನಕೇಂದ್ರ, ಸರಕಾರಿ ಪ್ರಾಥಮಿಕ ಆರೋಗ್ಯ ಘಟಕ, ಔಷಧಾಲಯಗಳು ಸರಕಾರಿ ಶಿಕ್ಷಕರ ತರಬೇತಿ ಕೇಂದ್ರ, ಕಲೆ ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು, ಎರಡು ಪ್ರೌಢಶಾಲೆ ಹಾಗೂ ಆಂಗ್ಲಮಾಧ್ಯಮ ಪ್ರೌಢಶಾಲೆ, ಪ್ರಾಥಮಿಕ ಶಾಲೆಗಳು, ಶೈಕಕ್ಷಣಿಕ ಹಾಗೂ ಆರೋಗ್ಯಕ್ಕಾಗಿ ಸುತ್ತಲಿನ ಗ್ರಾಮುಗಳಿಗೆ ಈ ಪಟ್ಟಣ ಒಂದು ಮುಖ್ಯ ಕೇಂದ್ರವಾಗಿದೆ.

ಇಲ್ಲಿ ಪ್ರತಿವರ್ಷ ಶ್ರಾವಣಮಾಸದಲ್ಲಿ ಸಂಗಮೇಶ್ವರ ಜಾತ್ರೆ ನಡೆಯುತ್ತದೆ. ಹುನಗುಂದದಲ್ಲಿ ಪುರಾತನ ದೇವಾಲಯಗಳು, ಶಾಸನಗಳು, ಕೋಟೆಗಳು, ಇರುವದರಿಂದ ಐತಿಹಾಸಿಕವಾಗಿ ಮಹತ್ವ ಪಡೆದಿದೆ. ಹೀಗೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಕ್ಷೇತ್ರ, ಧಾರ್ಮಿಕ ಕ್ಷೇತ್ರಗಳಲ್ಲಿ ಸಾಕಷ್ಟು ಮುಂದುವರೆದ ನಗರವಾಗಿದೆ. ಐತಿಹಾಸಿಕ ದೃಷ್ಟಿಯಿಂದ ಮಹತ್ವ ಪಡೆದ ಈ ನಗರ ಪುರಾತನ ದೇವಾಲಯಗಳು ಇಲ್ಲಿ ಚಿಕ್ಕಗುಡ್ಡದ ಮೇಲೆ ಜೈನ ಬಸದಿಯ ಅವಶೇಷಗಳು ಇದೆ. ಹಾಗೂ ಈ ಊರಿಗೆ ಸಾಕಷ್ಟು ಬಸ್ಸಿನ ಸೌಕರ್ಯವಿರುವುದು. ಈ ಪಟ್ಟಣದಲ್ಲಿ ಎಲ್ಲ ಜನಾಂಗದವರು ವಾಸಿಸುತ್ತಾರೆ.

**ಶಾಸನದ ಉಲ್ಲೇಖ :**

ಕ್ರಿ.ಶ. ೧೧ನೇ ಶತಮಾನದಲ್ಲಿ ಹುನಗುಂದ ಹೆಸರು ಕಲ್ಯಾಣಿ ಚಾಲುಕ್ಯರ ಎರಡನೆ ಸೋಮೇಶ್ವರನ ಶಾಸನ ಪೊನ್ನಗುಂದ ಎಂದು ಉಲ್ಲೇಖವಿದೆ. ಈ ಶಾಸನ ರಾಮಲಿಂಗ ಗುಡಿಯ ಮೇಲ್ಚಾವಣೆ ಮೇಲೆ ಇದೆ.

**ಸ್ಥಳ ಐತಿಹ್ಯ :**

ಹುನಗುಂದದ ಗುಡ್ಡದ ಮೇಲೆ ಹಳಸಿ ಮಣ್ಣು ಸಿಕ್ಕಿರುವುದರಿಂದ ಇದಕ್ಕೆ ಹೊನ್ನ ಕುಂಡ, ಹೊನ್ನಗುಂಡ ಎಂದು ಕರ್ಣೋಪಕರ್ಣವಾಗಿ ನಮಗಿದು ತಿಳಿದು ಬಂದಿದೆಯೆಂದು ಹಿರಿಯರು ಹೇಳುವರು.

**ವಾಸ್ತು ಕಲೆ :**

ಹುನಗುಂದ ನಗರದಲ್ಲಿ ಪ್ರಾಚೀನ ದೇಗುಲಗಳು ಮತ್ತು ಜೈನ ಬಸದಿಯ ಅವಶೇಷಗಳು ಇರುತ್ತವೆ. ರಾಮಲಿಂಗ ದೇವಾಲಯ ಮುದುಮಾರುತಿ, ಸಂಗಮೇಶ್ವರ ದೇವಾಲಯ, ಮಲ್ಲಿಕಾರ್ಜುನ ದೇವಾಲಯ, ರಾಮಲಿಂಗ ದೇವಾಲಯ ಮಾತ್ರ ಪ್ರಾಚೀನ ದೇವಾಲಯ ಇದು ಚಾಲುಕ್ಯ ಶೈಲಿಯನ್ನು ಹೊಂದಿದೆ.

| | | | |
|---|---|---|---|
| **1.** | **ದೇವಾಲಯ** | : | **ರಾಮಲಿಂಗ** |
| | ಮೂರ್ತಿ | : | ತ್ರಿಮೂರ್ತಿಗಳು |
| | ದಿಕ್ಕು | : | ಪೂರ್ವಾಭಿಮುಖ |
| | ಕಾಲ | : | ೧೦ನೇ ಶತಮಾನ |
| | ಶಿಲೆ | : | ಕಪ್ಪು ಶಿಲೆ |
| | ಸ್ಥಳ | : | ಗರ್ಭಗೃಹ |
| | ಅಳತೆ | : | ಲಿಂಗದ ಎತ್ತರ - ೩೦ ಸೆಂ.ಮೀ |
| | | | ಅಗಲ - ೨೫ ಸೆಂ.ಮೀ. |
| | ಸ್ವರೂಪ | : | ಉಬ್ಬು ಶಿಲ್ಪ |
| | ಭಂಗಿ | : | ನಿಂತಭಂಗಿ |
| | ಸ್ಥಿತಿ | : | ಸುಸ್ಥಿತಿ |

**ತ್ರಿಮೂರ್ತಿಗಳ ವಿವರಣೆ :**

ಈ ತ್ರಿಮೂರ್ತಿಗಳು ೧. ಗಣಪ, ೨. ಶಕ್ತಿದೇವತೆ ೩. ಮಹಿಷಮರ್ದಿನಿ. ಗರ್ಭಗುಡಿಯ ನೆಲದಡಿಯ ಎತ್ತರವಾದ ಪೀಠದ ಮೇಲೆ ಪೂರ್ವಾಭಿಮುಖವಾಗಿ ಬಲಕ್ಕೆ ಗಣಪ, ಮಧ್ಯದಲ್ಲಿ ಶಕ್ತಿದೇವತೆ ಕೊನೆಯಲ್ಲಿ ಮಹೀಷಮರ್ಧಿನಿ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ.

**1. ಗಣಪ**

ಈ ಗಣಪತಿಯು ದೇವಾಲಯದ ಗರ್ಭಗೃಃದ ನೆಲದಡಿಯ ಎತ್ತರವಾದ ಪೀಠದಲ್ಲಿ ಸುಖಾಸನಭಂಗಿಯಲ್ಲಿ ಕುಳಿತಿದ್ದಾನೆ. ಈ ಮೂರ್ತಿಯು ಕಪ್ಪು ಶಿಲೆಯಲ್ಲಿದೆ. ಇತನಿಗೆ ಎರಡು ಕೈಗಳಿದ್ದು ಬಲಗೈಯಲ್ಲಿ ಪಾಶ, ಇರುತ್ತದೆ. ಎಡಗೈಯಲ್ಲಿ ಫಲಪುಷ್ಪ ಇರುತ್ತದೆ.

ಆಭರಣಗಳು :

ತಲೆಗೆ ಕಿರೀಟ, ಕೊರಳಹಾರ, ಕೈಯಲ್ಲಿ ಕಡಗ, ಕಾಲಲ್ಲಿ ಕಗಡ, ಸೊಂಟಕ್ಕೆ ಪಟ್ಟಿಧರಿಸಿದ್ದಾನೆ. ಎತ್ತರವಾದ ಜಗಲಿಯ ಮೇಲೆ ಸುಖಾಸನದ ಭಂಗಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ.

**2. ಶಕ್ತಿ ದೇವತೆ :**

ಈ ಶಕ್ತಿದೇವತೆಯ ಮೂರ್ತಿಯನ್ನು ಗಣಪನ ಎಡಭಾಗದಲ್ಲಿ ನಿರ್ಮಿಸಿದ್ದಾರೆ. ಈ ಮೂರ್ತಿಯ ನಿಂತ ಭಂಗಿಯಲ್ಲಿದ್ದು ಉಬ್ಬು ಶಿಲ್ಪವಾಗಿದೆ. ಇದು ಕಪ್ಪುಶಿಲ್ಪವಾಗಿದೆ. ಈ ದೇವತೆಗೆ ನಾಲ್ಕು ಕೈಗಳಿವೆ.

ಆಭರಣಗಳು :

ತಲೆಗೆ ಕಿರೀಟ, ಕೊರಳಹಾರ, ಕಿವಿಗೆ ಕರ್ಣಕುಂಡಲ, ಕಾಲ್ಗಡಗ, ಮತ್ತು ಕೈಗಡಗ ಸೊಂಟಕ್ಕೆ ಪಟ್ಟಿ ಧರಿಸಿದ್ದಾಳೆ.

**3. ಮಹೀಷಿಮರ್ಧಿನಿ :**

ಈ ಮೂರ್ತಿಯು ಎತ್ತರವಾದ ಪೀಠದ ಮೇಲೆ ಶಕ್ತಿದೇವತೆಯ ಎಡಭಾಗದಲ್ಲಿ ನಿಂತಭಂಗಿಯಲ್ಲಿದೆ.

ಇದು ಉಬ್ಬುಶಿಲ್ಪವಾಗಿದೆ. ಈ ಮೂರ್ತಿಗೆ ನಾಲ್ಕು ಕೈಗಳಿವೆ. ಒಂದನೇ ಬಲಗೈಯಲ್ಲಿ ತ್ರಿಶೂಲವನ್ನು ಹಿಡಿದು ಅಥವಾ ತನ್ನ ಪಾದದ ಕೆಳಗೆ ಇರುವ ಮಹಿಷಿ ಮರ್ಧಿನಿಗೆ ಚುಚ್ಚುತ್ತಿದ್ದಾಳೆ. ಎರಡನೆ ಕೈಯಲ್ಲಿ ಚಕ್ರವನ್ನು ೩ನೇ ಕೈಯಲ್ಲಿ ಶಂಖ, ನಾಲ್ಕನೇ ಕೈಯಲ್ಲಿ ಪಾನಪಾತ್ರೆ ಹಿಡಿದ್ದಾಳೆ. ತನ್ನ ಎಡಗಾಲನ್ನು ಮಹೀಷಿಮರ್ಧಿನಿಯ ಬೆನ್ನಿನ ಮೇಲೆ ಇಟ್ಟದ್ದಾಳೆ.

ಆಭರಣಗಳು :

'ತಲೆಗೆ ಕಿರೀಟ, ಮುಕುಟ, ಕೊರಳಹಾರ, ಕಿವಿಗೆ ಕರ್ಣಕುಂಡಲ, ಕಾಲ್ಗಡಗ ಮತ್ತು ಕೈಗಡಗ ಧರಿಸಿದ್ದಾಳೆ.

## ಉಮಾಮಹೇಶ್ವರ ಕಾರ್ತಿಕೆಯ ಮತ್ತು ಗಣವೃಂಥ

ರಾಮಲಿಂಗೇಶ್ವರ ದೇಗುಲವನ್ನು ಪ್ರವೇಶ ಮಾಡಿದಾಗ ಸಭಾಮಂಟಪದಲ್ಲಿ ನಂದಿಯು ಇದೆ. ಸಭಾಮಂಟಪದ ಮೇಲ್ಛಾವಣೆಯಲ್ಲಿ ಎಡಭಾಗದಲ್ಲಿ ಒಂದು ಶಾಸನವಿದೆ. ಇದರ ಮಧ್ಯದಲ್ಲಿರುವ ಭುವನೇಶ್ವರಿಯು ಮೂರು ಉಬ್ಬು ಶಿಲ್ಪ ಹೊಂದಿದ ಫಲಕಗಳಿವೆ. ಮೊದಲನೇಯ ಫಲಕದಲ್ಲಿ ನಂದಿಯನ್ನೇರಿದ ಶಿವ ಪಾರ್ವತಿಯರ ಚಿತ್ರವಿದೆ. ನಂದಿಯ ಹಿಂಭಾಗದಲ್ಲಿ ಶಿವನೊಡನೆ ಮುಖನಾಡಿ ಅಭದ್ರವಾಗಿ ಸುಖಾಸನದಲ್ಲಿ ಪಾರ್ವತಿ ಕುಳಿತಿರುವಳು. ಅವಳ ಎಡಗೈಯಲ್ಲಿ ಪದ್ಮವಿದೆ. ಚತುರ್ಭುಜನಾದ ಶಿವ ಎರಡು ಕೈಗಳಲ್ಲಿ ತಂಬೂರಿಯನ್ನು ಇನ್ನುಳಿದ ಎರಡರಲ್ಲಿ ಡಮರು ಮತ್ತು ತ್ರಿಶೂಲಗಳನ್ನು ಹಿಡಿದಿರುವನು. ಅವನು ಸುಖಾಸನದಲ್ಲಿರುವನು ಸುತ್ತಲೂ ಗಣಧಾರಿರುವರು. ನಂದಿಯ ಹಿಂದಿನ ಪಾದದಬಳಿ ನವಿಲುವನ್ನೇರಿದ ಕಾರ್ತೀಕೆಯನಿರುವನು. ನಾಗನಾಥ ದೇವಾಲಯದ ಭುವನೇಶ್ವರಿಯ ಶಿಲ್ಪಗಳನ್ನು ಹೋಲುವುದು. ಭುವನೇಶ್ವರಿಯ ಮಧ್ಯಭಾಗದ ಎರಡು ಚಿತ್ರಗಳು ಹಾಳಾದಂತೆ ಕಂಡು ಬರುವುದು.

## ಗರುಡು ವಾಹನ ಚತುರ್ಭುಜ ವಿಷ್ಣು

ಈ ಶಿಲ್ಪದ ಗರುಡವನ್ನೇರಿದ ಚತುರ್ಭುಜ ವಿಷ್ಣುವಿನದಾಗಿದೆ. ವಿಷ್ಣುವಿನ ಹಸ್ತದಲ್ಲಿ ಚಕ್ರ, ಗದೆ, ಶಂಖ, ಮತ್ತು ಪದ್ಮಗಳಿವೆ. ಸುತ್ತಲೂ ಮುನಿವೃಂದ ಹಾಗೂ ಗಣವೃಂದ ಇವೆ.

| | | |
|---|---|---|
| ಮೂರ್ತಿ | : | ಕೇಶವ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೩ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ | : | ಲಿಂಗದ ಎತ್ತರ - ೮೦ ಸೆಂ.ಮೀ |
| | | ಅಗಲ - ೬೦ ಸೆಂ.ಮೀ. |
| ಸ್ವರೂಪ | : | ಸಮ ಉಬ್ಬು ಶಿಲ್ಪ |

| | | |
|---|---|---|
| ಭಂಗಿ | : | ನಿಂತಭಂಗಿ |
| ಸ್ವರೂಪ | : | ಎಡಕ್ಕೆ ಶ್ರೀದೇವಿ |
| | | ಬಲಕ್ಕೆ ಭೂದೇವಿ |
| ಸ್ಥಿತಿ | : | ದುಸ್ಥಿತಿ |

**ತ್ರಿಮೂರ್ತಿ ವಿವರಣೆ :**

ಇಲ್ಲಿ ದೊರೆತ ಮೂರ್ತಿಗಳಲ್ಲಿ ಕೇಶವ ಮೂರ್ತಿಯೂ ಕೂಡಾ ಅತ್ಯಂತ ಮನೋಹರವಾದ ಶಿಲ್ಪವಾಗಿದೆ. ಕೇಶವನು ಕೈಯಲ್ಲಿ ಶಂಖ, ಚಕ್ರ, ಗದಾ, ಪದ್ಮದಾರಿಯಾಗಿದ್ದಾನೆ. ನಿಂತಭಂತಿಯಲ್ಲಿರುವ ಈ ಮೂರ್ತಿಯು ರತ್ನಖಚಿತವಾದ ಕಿರೀಟ ಮುಖವನ್ನು ಧರಿಸಿದ್ದಾನೆ. ಸ್ವಲ್ಪ ವಿಶಾಲವಾದ ನೇತ್ರಗಳು ಎದೆಯ ಮೇಲೆ ಕಂಠಿಹಾರ, ಕೈಯಲ್ಲಿ ಕೈಗಡಗ, ಸೊಂಟಪಟ್ಟಿ, ಮೊಣಕಾಲಿನವರೆಗೂ ಇಳಿಬಿಟ್ಟ ಧೋತ್ರಿ, ಅದರ ಮೆಲೆ ಇರುವ ಜಪಮಾಲೆ ಮೂರ್ತಿಯ ಸೌಂದರ್ಯಕ್ಕೆ ದಕ್ಕೆ ಬರದ ರೀತಿಯಲ್ಲಿ ಶಿಲ್ಪಿಸಿಲಾಗಿದೆ. ಮೂರ್ತಿಯ ಎಡಬಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರು ಇದ್ದಾರೆ. ಇದಕ್ಕೆ ಹೊಂದಿಕೊಂಡು ಕೀರ್ತಿಮುಕುಟವನ್ನು ಹೊಂದಿದ ಮಕರ ತೋರಣವಿದೆ. ಈ ಮೂರ್ತಿಯ ಶಿಲೆ ಕಪ್ಪಾಗಿರುವುದು. ಇದಕ್ಕೆ ಮೆರಗನ್ನು ನೀಡಿರುವದರಿಂದ ಮೂರ್ತಿಯ ಸೌಮಧರ್ಯ ಮತ್ತಷ್ಟು ಹೆಚ್ಚಿಸಿದೆ ಇದು ೧೩ನೇ ಶತಮಾನದ ಮೂರ್ತಿಯೆಂದು ಶೈಲಿಯ ಆಧಾರ ಮೇಲೆ ಗುರ್ತಿಸಬಹುದು.

**2. ದೇವಾಲಯ ಮುದುಮಾರುತಿ :**

| | | |
|---|---|---|
| ಮೂರ್ತಿ | : | ಹನುಮಂತ |
| ದಿಕ್ಕು | : | ದಕ್ಷಿಣಾಭಿಮುಖ |
| ಕಾಲ | : | ೧೬ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ | : | ಲಿಂಗದ ಎತ್ತರ - ೧೧೦ ಸೆಂ.ಮೀ |
| ' | | ಅಗಲ - ೭೨ ಸೆಂ.ಮೀ. |
| ಸ್ವರೂಪ | : | ಉಬ್ಬು ಶಿಲ್ಪ |
| ಭಂಗಿ | : | ನಿಂತಭಂಗಿ |

**ಶಿಲ್ಪದ ವಿವರಣೆ :**

ಈ ಆಂಜನೇಯ ದೇವಾಲಯ ಹುನಗುಂದ ನಗರದಲ್ಲಿ ಊರು ಒಳಗಡೆ ಇರುತ್ತದೆ. ಈ ದೇವಾಲಯದಲ್ಲಿ ಆಂಜನೇಯುದಲ್ಲಿ ಆಂಜನೇಯು ಮೂರ್ತಿಯು ದಕ್ಷಿಣಾಭಿಮುಖವಾಗಿರುತ್ತದೆ. ಈ ಮೂರ್ತಿಯ ಸ್ವರೂಪ ಉಬ್ಬುಶಿಲ್ಪವಾಗಿದ್ದು ದಕ್ಷಿಣಾಭಿಮುಖವಾಗಿರುತ್ತದೆ. ಈ ಮೂರ್ತಿಯ ಶಿಲೆಯು ಕಪ್ಪಾಗಿರುತ್ತದೆ. ಬಲಗೈಯನ್ನು ಅಭಯಹಸ್ತ ಮಾಡಿದ್ದು ಎಡಗೈಯ ಸೊಂಟದ ಮೇಲೆ ಇರುತ್ತದೆ.

ಈ ಮುದುಮಾರುತಿ ಮೂರ್ತಿಯ ಮೇಲಿನ ಆಭರಣಗಳು ಕೊರಳ ಹಾರ ಕರ್ಣಕುಂಡಲ, ಕಾಲ್ಗಡಗ, ಕೈಗಡ್ಗ, ನಡುಪಟ್ಟಿಗಳನ್ನು ಧರಿಸಿದ್ದಾನೆ.

**ಶಿಲ್ಪದ ವೈಶಿಷ್ಟ್ಯ :-**

ಹುನಗುಂದ ನಗರದಲ್ಲಿ ವೈವಿಧ್ಯಮಯ ಪುರಾತನ ದೇವಾಲಯಗಳಲ್ಲಿ ರಾಮಲಿಂಗದೇವಾಲಯ ವೈಖರಿ ವಿಶಿಷ್ಟ್ಯವಾದದು. ಚಾಲುಕ್ಯ ಶೈಲಿಯ ಸ್ತಂಭಗಳು ಈ ಗುಡಿಯ ವೈಶಿಷ್ಟ್ಯ. ಈ ಗುಡಿಯ ಬಲಭಾಗದಲ್ಲಿ ಗರ್ಭಗುಡಿಯ ಗೋಡೆಯ ಭಾಗದಲ್ಲಿ ಗುಹಃದೆ. ಉಬ್ಬು ಶಿಲ್ಪವನ್ನು ಹೊಂದಿದ ಗಣಪತಿ, ಶಕ್ತಿದೇವತೆ, ಮಹಿಷಿಮರ್ಧಿನಿ ಮೂರ್ತಿಗಳು ಸುಂದರವಾಗಿ ಕೆತ್ತಲ್ಪಟ್ಟವೆ. ಕಪ್ಪ ಶಿಲೆಯಿಂದ ಕೆತ್ತಲ್ಪಟ್ಟ ಈ ಮೂರ್ತಿಗಳು ಆಕರ್ಷಣೀಯವಾಗಿವೆ.

ಊರು ಒಳಗೆ ಇರುವ ಮುದುಮಾರುತಿ ದೇವಾಲಯದ ಮೂರ್ತಿ ಹನುಮಂತನ ನಿಂತಭಂಗಿಯಲ್ಲಿದ್ದು ಸುಂದರವಾಗಿದೆ. ಹೀಗೆ ಹುನಗುಂದ ಪಟ್ಟಣದ ಈ ದೇವಾಲಯಗಳಲ್ಲಿದೆ ಇತ್ತೀಚಿನ ಸಂಗಮೇಶ್ವರ ಮಲ್ಲಿಕಾರ್ಜುನ ದೇವಾಲಯಗಳು ಆ ನಗರದ ಪ್ರಮುಖ ದೇವಾಲಯಗಳಾಗಿವೆ.

# ೬ - ಕೂಡಲಸಂಗಮ

ಜಿಲ್ಲೆ : ಬಾಗಲಕೋಟ

ತಾಲೂಕು : ಹುನಗುಂದ

ಗ್ರಾಮ : ಕೂಡಲಸಂಗಮ

ಹೋಬಳಿ : ಹುನಗುಂದ

ಮಾರ್ಗ : ಬಿಜಾಪೂರ-ಬೆಂಗಳೂರು

ಜನವಸತಿ : ೧೦,೦೦೦

**ಸ್ಥಳ ಪರಿಚಯ :**

ಹುನಗುಂದ ಉತ್ತರಕ್ಕೆ ೧೬ ಕಿ.ಮೀ ದೂರದಲ್ಲಿ ಕೂಡಲಸಂಗಮವಿದೆ. ಇದು ಐತಿಹಾಸಿಕ ಪ್ರಸಿದ್ಧಿ ಸ್ಥಳವಾಗಿದೆ. ಬಿಜಾಪೂರ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯ (೧೩) ರೋಡನ ಸಂಗಮ ಕ್ರಾಸ್‌ನಿಂದ ೬ ಕಿ.ಮೀ ದೂರದಲ್ಲಿ ಈ ಪವಿತ್ರವಾದ ಸ್ಥಳವಿದೆ. ಇಲ್ಲಿಗೆ ಬಸ್ಸಿನ ಸೌಕರ್ಯ ಸಾಕಷ್ಟಿದೆ. ಇತ್ತೀಚಿಗೆ ಇದು ಪ್ರವಾಸಿಕೇಂದ್ರವಾಗಿ ಪರಿವರ್ತನೆ ಹೊಂದಿದೆ.

ಈ ಗ್ರಾಮದಲ್ಲಿ ಶೈವ ಧರ್ಮವು ಹೆಚ್ಚು ಪ್ರಚಲಿವಿದೆ. ಮಲಪ್ರಭಾ ಮತ್ತು ಕೃಷ್ಣಾ ನದಿಯ ದಂಡೆಯಲ್ಲಿ ಸಂಗಮೇಶ್ವರ ದೇವಾಲಯ ಹಾಗೂ ಸಂಗಮೇಶ್ವರ ದೇವಾಲಯದ ಗರ್ಭಗೃಹದ ಲಿಂಗದಲ್ಲಿ ಬಸವೇಶ್ವರರು ಐಕ್ಯಹೊಂದಿದ ಸ್ಥಳವೆಂದು ಒಂದು ತಗ್ಗನ್ನು ಇಗಲೂ ತೋರಿಸುತ್ತಾರೆ. ವಿಜಯ ನಗರದ ದುರಂತ ನಡೆದ ರಕ್ಕಸಗಿ-ತಂಗಡಿಗಿ ರಣಭೂಮಿ ಇಲ್ಲಿಗೆ ಹತ್ತಿರವಿದೆ. ಹೀಗೆ ಕೂಡಲಸಂಗಮ ಐತಿಹಾಸಿಕವಾಗಿ ಪ್ರಸಿದ್ಧಿ ಹೊಂದಿದೆ.

**ಶಾಸನ ಉಲ್ಲೇಖ :**

ಸಂಗಮದ ಬಗ್ಗೆ ತಿಳಿಸುವ ಕ್ರಿ.ಶ. ೧೧ನೇ ಶತಮಾನದಲ್ಲಿ ಸಂಗಮೇಶ್ವರ ದೇವಾಲಯದ ಕಂಬದಲ್ಲಿಯ ಶಾಸನ ಇದೊಂದು ಅಗ್ರಹಾರವಾಗಿದ್ದು ಎಂದು ತಿಳಿಸುತ್ತದೆ. ಈ ಊರಿಗೆ "ಕೂಡಲ ಕಪ್ಪಡಿ ಸಂಗಮ" ವೆಂದು ಈ ಶಾಸನ ಉಲ್ಲೇಖಿಸಿದೆ.

**ಸ್ಥಳ ಐತಿಹ್ಯ :**

ಕೂಡಲಸಂಗಮದ ಬಗ್ಗೆ ಅಲ್ಲಿಯ ಜನರು ಹೀಗೆ ಹೇಳುತ್ತಾರೆ. ಕೃಷ್ಣ ಮತ್ತು ಮಲಪ್ರಭಾ ನದಿಗಳು ಅಲ್ಲಿ ಸಂದಿಸುವದರಿಂದ ಅದಕ್ಕೆ ಶ್ರೀ ಕ್ಷೇತ್ರ ಕೂಡಲಸಂಗಮ ಎಂದು ಕರೆಯುತ್ತಾರೆ. ಆದ್ದರಿಂದ ಈ ಸುಕ್ಷೇತ್ರ ಕೂಡಲಸಂಗಮ ಐತಿಹಾಸಿಕವಾಗಿ ಪ್ರಸಿದ್ಧಿ ಹೊಂದಿದೆ. ಕೃಷ್ಣಾನದಿಯಲ್ಲಿ ಜಳಕಮಾಡಿದರೆ ಕಪ್ಪು ಆಗುತ್ತಿದ್ದರು ಆದ್ದರಿಂದ ಕಪ್ಪಡಿಸಂಗಮವೆಂದು ಕರೆದರು.

**ವಾಸ್ತು ಕಲೆ :-**

ಕೂಡಲಸಂಗಮದಲ್ಲಿರುವ ದೇವಾಲಯಗಳು ಅತ್ಯಂತ ಪ್ರಸಿದ್ಧಿ ಹೊಂದಿವೆ. ಇಲ್ಲಿ ಸಂಗಮೇಶ್ವರ ದೇವಾಲಯ ಸುಪ್ರಸಿದ್ಧಿವಾಗಿದ್ದ ಕಲ್ಯಾಣಿ ಚಾಲುಕ್ಯರ ಶೈಲಿಯನ್ನು ಹೊಂದಿದೆ. ಈ ದೇವಾಲಯಗಳಲ್ಲದೆ ಬಸವಣ್ಣನವರ ಐಕ್ಯಮಂಟಪ, ಜಾತವೇದ ಮುನಗಳ ಗದ್ದಿಗೆ, ಸಿದ್ದೇಶ್ವರ ಸ್ವಾಮಿಗದ್ದಿಗೆ, ನೊರೇಂದೇಶ್ವರ ಗದ್ದಿಗೆ, ಹಾಗೂ ಗಣಪತಿ ದೇವಾಲಯಗಳು ಪ್ರಸಿದ್ಧಿಯಾಗಿವೆ.

**1.ದೇವಾಲಯ : ಬಸವಣ್ಣನವರ ಐಕ್ಯಮಂಟಪ**

ಶಿಲ್ಪ : ಈಶ್ವರ ಲಿಂಗ

ದಿಕ್ಕು : ದಕ್ಷಿಣಾಭಿಮುಖ

ಕಾಲ : ೧೩ನೇ ಶತಮಾನ

ಶಿಲೆ : ಕಂದು ಶಿಲೆ

ಸ್ಥಳ : ಮಂಟಪ

ಅಳತೆ : ಎತ್ತರ - ೭೮ ಸೆಂ.ಮೀ

ಅಗಲ - ೬೦ ಸೆಂ.ಮೀ.

ಸ್ಥಿತಿ : ಸುಸ್ಥಿತಿ

**ಲಿಂಗದ ವಿವರಣೆ :**

ಈ ಶಿವಲಿಂಗವು ಕೂಡಲಸಂಗಮ ಕ್ಷೇತ್ರದ ಬಸವಣ್ಣನವರ ಐಕ್ಯಮಂಟಪದಲ್ಲಿದೆ. ಈ ಐಕ್ಯ ಮಂಟಪವು ನದಿದಂಡೆಯಲ್ಲಿದೆ. ಹುಡೇದಾಕಾರದ ನಲದಡಿಯಲ್ಲಿ ೧೨೦ ಮೆಟ್ಟಿಲುಗಳು, ಕೆಳಗೆ ಹೋದರೆ ಈ ಐಕ್ಯಮಂಟಪವು ಸಿಗುತ್ತದೆ. ಈ ಮಂಟಪದಲ್ಲಿ ನೀರು ಜೀನ-ಜೀನಿ ಹರಿಯುತ್ತದೆ. ಇಲ್ಲಿ ಬಸವಣ್ಣನವರು ಐಕ್ಯವಾಗಿದ್ದಾರೆ ಎಂಬುದು ಜನರ ವಾಡಿಕೆಯಾಗಿದೆ. ಈ ಲಿಂಗವು ವೃತ್ತಾಗಾರದಲ್ಲಿದೆ ಹಾಗೂ ಚಾಲುಕ್ಯ ಶೈಲಿಯ ನುಣುಪಾದ ನಾಲ್ಕು ಸ್ತಂಭಗಳನ್ನು ಹೊಂದಿದೆ. ಇದು ಕಪ್ಪು ಶಿಲೆಯಲ್ಲಿ ಇರುತ್ತದೆ. ಇದರ ಜಲಹರಿಯು ಪೂರ್ವಕ್ಕೆ ಇರುತ್ತದೆ.

**2.ದೇವಾಲಯ : ಸಂಗಮೇಶ್ವರ**

ಶಿಲ್ಪ : ಉದ್ಭವಲಿಂಗ

ದಿಕ್ಕು : ಪೂರ್ವಾಭಿಮುಖ

ಕಾಲ : ೧೧ನೇ ಶತಮಾನ

ಶಿಲೆ : ಕಪ್ಪು ಶಿಲೆ

ಸ್ಥಳ : ಗರ್ಭಗೃಹ

ಶೈಲಿ : ಚಾಲುಕ್ಯ ಶೈಲಿ

ಅಳತೆ : ಎತ್ತರ - ೮೦ ಸೆಂ.ಮೀ

ಅಗಲ - ೭೦ ಸೆಂ.ಮೀ.

ಸ್ಥಿತಿ : ಸುಸ್ಥಿತಿ

**ಲಿಂಗದ ವಿವರಣೆ :**

ಈ ದೇವಾಲಯವು ಕೃಷ್ಣಾ ಮತ್ತು ಮಲಪ್ರಭಾ ನದಿಗಳು ಕೂಡವ ಸ್ಥಳದಲ್ಲಿದೆ. ಸುಪ್ರಸಿದ್ಧಿ ಸಂಗಮೇಶ್ವರ ದೇವಾಲಯ ಪ್ರಕೃತಿ ಸೌಂದರ್ಯದ ಮಡಿಲಿನಲ್ಲಿದೆ. ಇದನ್ನು ಸುಮಾರು ೮೦೦ ವರ್ಷಗಳ ಹಿಂದೆ ದ್ಯಾವನಾಯಕನೆಂಬ ಜೈನನು ಕಟ್ಟಿಸಿದನೆಂದು ಹೇಳುತ್ತಾರೆ. ಈ ಗುಡಿಯಲ್ಲಿ ಎರಡು ಶಿಲಾ ಶಾಸನಗಳುರುತ್ತದೆ.

ಈ ಸಂಗಮೇಶ್ವರ ಲಿಂಗವು ಕಪ್ಪು ಶಿಲೆಯಾಗಿದೆ. ಗರ್ಭಗೃಹದಲ್ಲಿ ವೃತ್ತಾಕಾರದಲ್ಲಿ ಈ ಲಿಂಗವು ಪ್ರತಿಷ್ಠಾಪಿಸಿದ್ದು ಇದು ಉದ್ಭವಲಿಂಗವಾಗಿದೆ. ಇದರ ಜಲಹರಿಯು ದಕ್ಷಿಣಕ್ಕೆ ಇರುತ್ತದೆ. ಈ ಲಿಂಗದ ಮೇಲೆ ಸಂಗಮೇಶ್ವರನ ಮೂರ್ತಿಯನ್ನು ಜೋಡಿಸಲಾಗಿದೆ. ಬಸವೇಶ್ವರನು ಕಲ್ಯಾಣಪುರದಿಂದ ಈ ಊರಿಗೆ ಬಂದು ಸಂಗಮೇಶ್ವರ ಲಿಂಗದಲ್ಲಿ ಐಕ್ಯ ಹೊಂದಿದನಂತೆ, ಈ ಲಿಂಗದಲ್ಲಿ ಬಸವೇಶ್ವರನು ಐಕ್ಯ ಹೊಂದಿದ ಸ್ಥಳವೆಂದು "ಒಂದು ತಗ್ಗನ್ನು" ಈಗ್ಯೂ ತೋರಿಸುತ್ತಾರೆ.

**ಜಾತ್ರೆ :**

ಈ ಸಂಗಮೇಶ್ವರ ದೇವಸ್ಥಾನದ ಜಾತ್ರೆ ಚೈತ್ರ ಬಹುಳ ಪಂಚಮಿ ದಿವಸ ಮಾಘಮಾಸದಲ್ಲಿ ಜಾತ್ರೆಯು ನಡೆಯುತ್ತದೆ. ಈ ಜಾತ್ರೆಯು ಬಾಗಲಕೋಟಯಿಂದ ಬಂಗಾರದ ಕಳಸ, ಇದ್ದಲಗಿಯಿಂದ ಇಲಾಲ, ಬೆಳಗಲ್‌ದಿಂದ ಹಗ್ಗ, ಗಂಜಾಳದಿಂದ ತಳಿರು, ತೋರಣ, ಕುಂಗಳ ಬರುತ್ತವೆ. ಇವೆಲ್ಲ ಬಂದನಂತರ ಸಂಜೆ ೬ ಗಂಟೆಗೆ ತೇರು ಎಳೆಯುತ್ತದೆ. ಈ ತೇರು ಪಶ್ಚಿಮಕ್ಕೆ ಹೋಗಿ ಪೂರ್ವಕ್ಕೆ ಬರುತ್ತದೆ. ಈ ದೇವಾಲಯಕ್ಕೆ ೫ ಹೊತ್ತು ಪೂಜೆ ನಡೆಯುತ್ತದೆ. ೧೧೦ ಮಂದಿ ಪೂಜಾರಿಗಳು ಇರುತ್ತಾರೆ. ಈ ಜಾತ್ರೆಯಲ್ಲಿ ಲಕ್ಷಗಟ್ಟಲೆ ಜನ ಬಂದು ತೀರ್ಥದಲ್ಲಿ ಸ್ನಾನಮಾಡಿ ಕೂಡಲಸಂಗಮನನ್ನು ಅರ್ಪಿಸಿ ಕೃತಾರ್ಥರಾಗುತ್ತಾರೆ.

| | | |
|---|---|---|
| **3.ದೇವಾಲಯ** | **:** | **ಗಣಪತಿ ಮಂಟಪ** |
| ಮೂರ್ತಿ | : | ಗಣಪತಿ |
| ದಿಕ್ಕು | : | ಪಶ್ಚಿಮಾಭಿಮುಖ |
| ಕಾಲ | : | ೧೩ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಸಂಗಮೇಶ್ವರ ಗುಡಿಯ ಎದುರಿನ ಮಂಟಪ |
| ಶೈಲಿ | : | ಚಾಲುಕ್ಯ ಶೈಲಿ |
| ಅಳತೆ | : | ಎತ್ತರ - ೯೦ ಸೆಂ.ಮೀ |
| | | ಅಗಲ - ೭೦ ಸೆಂ.ಮೀ. |
| ಸ್ವರೂಪ | : | ಉಬ್ಬು ಶಿಲ್ಪ |
| ಭಂಗಿ | : | ಸುಖಾಸನ ಭಂಗಿ |

**ಮೂರ್ತಿಯ ವಿವರಣೆ :**

ಈ ಗಣಪತಿ ಮಂಟಪವು ಸಂಗಮೇಶ್ವರ ಗುಡಿಯ ಎದುರಿಗೆ ಇರುತ್ತದೆ. ಈ ಮಂಟಪದಲ್ಲಿ ಗಣಪತಿ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಇದು ಕ್ರಿ.ಶ. ೧೩ನೇ ಶತಮಾನದದ ಮೂರ್ತಿಯಾಗಿದ್ದು ಸ್ವರೂಪ ಉಬ್ಬುಶಿಲ್ಪವಾಗಿದೆ. ಸುಖಾಸನ ಭಂಗಿಯಲ್ಲಿದೆ. ಚಾಲುಕ್ಯ ಶೈಲಿಯನ್ನು ಹೊಂದಿದೆ. ಇದಕ್ಕೆ ಇತ್ತಿತ್ತಲಾಗಿ ಬಣ್ಣವನ್ನು ಕೊಟ್ಟಿದ್ದಾರೆ. ಈ ಮೂರ್ತಿಯು ನುಣುಪಾಗಿ ಸುಂದರವಾಗಿದೆ. ಇದು ಕಪ್ಪು ಶಿಲೆಯನ್ನು ಹೊಂದಿದೆ. ಈ ಮೂರ್ತಿಗೆ ನಾಲ್ಕು ಕೈಗಳಿದ್ದು ಬಲಗೈಯನ್ನು ಅಭಯಹಸ್ತ ಮಾಡಿದ್ದಾನೆ. ಎಡಗೈಯಲ್ಲಿ ಪರಶು ಇರುತ್ತದೆ. ಮೂರನೆಯ ಕೈಯಲ್ಲಿ ಶಂಖ, ನಾಲ್ಕನೆಯ ಕೈಯಲ್ಲಿ ಪುಷ್ಪವಿರುತ್ತದೆ.

**ಆಭರಣಗಳು :**

ಈ ಗಣಪನ ಮೂರ್ತಿಗೆ ತಲೆಗೆ ಕಿರೀಟ, ಕೊರಳಹಾರ, ಕೈಯಲ್ಲಿ ಕಡಗ, ಕಾಲಲ್ಲಿ ಕಡಗ, ಸೊಂಟಕ್ಕೆ ಪಟ್ಟಿ ಧರಿಸಿದ್ದಾನೆ. ಎತ್ತರವಾದ ಜಗಲಿಯ ಮೇಲೆ ಈ ಮೂರ್ತಿಯನ್ನು ನಿರ್ಮಿಸಿದ್ದಾರೆ.

**ಮೂರ್ತಿಶಿಲ್ಪದ ವೈಶಿಷ್ಟ್ಯ :**

ಕೂಡಲ ಸಂಗಮದಲ್ಲಿರುವ ಪುರಾತನ ದೇವಾಲಯಗಳು ಚಾಲುಕ್ಯ ಶೈಲಿಯನ್ನು ಹೊಂದಿದೆ. ಈ ಗುಡಿಯ ಶಿಲ್ಪವು ಸುಮಾರು ೮೦೦ ವರ್ಷಗಳ ಪ್ರಾಚೀನವೆಂದು ಶಿಲ್ಪಶಾಸ್ತ್ರಜ್ಞರು ಹೇಳುತ್ತಾರೆ. ಈ ಗುಡಿಯ ಬಲಭಾಗದಲ್ಲಿರುವ ಕಲ್ಲು ಮಂಟಪವನ್ನು "ಸಾರಂಗದೇವ ಮಠ" ವೆಂದು ಕರೆಯುತ್ತಾರೆ.

ಈ ಗುಡಿಯ ಗೋಡೆಯ ಬಲ ಮತ್ತು ಎಡಪಾರ್ಶ್ವದಲ್ಲಿ ಮಹಿಷಿಮರ್ಧಿನಿ, ಶಕ್ತಿದೇವತೆ ಹಾಗೂ ಇತರ ಮೂರ್ತಿಗಳು ವಿಶಿಷ್ಟವಾಗಿದೆ. ಈ ಮೂರ್ತಿಗಳ ಉಬ್ಬು ಶಿಲ್ಪವಾಗಿವೆ. ಹಾಗೂ ದೇವಕೋಷ್ಠ ವೈಶಿಷ್ಟ ಪೂರ್ಣವಾಗಿದೆ.

ಗುಡಿಯ ದ್ವಾರದಲ್ಲಿ ಬಲಕ್ಕೆ ಬಸವೇಶ್ವರ ಎಡಕ್ಕೆ ನೀಲಮ್ಮನ ಮೂರ್ತಿಗಳು ಸುಂದರವಾಗಿವೆ.

# ೭-ಕರಡಿ

ಜಿಲ್ಲೆ : ಬಾಗಲಕೋಟ
ತಾಲೂಕು : ಹುನಗುಂದ
ಗ್ರಾಮ : ಕರಡಿ
ಹೋಬಳಿ : ಕರಡಿ
ಮಾರ್ಗ : ಹುನಗುಂದ-ಕೋಡಿಹಾಳ
ಜನವಸತಿ : ೫,೦೦೦

**ಸ್ಥಳ ಪರಿಚಯ :**

ಇದು ಹುನಗುಂದ ಈಶಾನ್ಯಕ್ಕೆ ೧೬ ಕಿ.ಮೀ ದೂರದಲ್ಲಿದೆ. ಇದು ಅತ್ಯಂತ ಪ್ರಾಚೀನ ಗ್ರಾಮವಾಗಿದೆ ಎಂಬುದಕ್ಕೆ ಇಲ್ಲಿನ ಸ್ಮಾರಕಗಳು ಹಾಗೂ ದೇವಾಲುಗಳು ಮತ್ತು ಶಿಲಾಶಾಸನಗಳು, ಜೈನಬಸದಿಗಳು, ಈ ಗ್ರಾಮಕ್ಕೆ ಜೀವಂತ ಸಾಕ್ಷಿಯಾಗಿವೆ. ಈ ದೇವಾಲಯದಿಂದ ಈ ಗ್ರಾಮವು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದುಕೊಂಡಿದೆ. ಹಾಗೂ ಕ್ರಿ.ಶ. ೧೫೫೭ ರಲ್ಲಿ ವಿಜಯನಗರ ಕಾಲದ ಸದಾಶಿವರಾಯನ ಶಾಸನವಿದೆ. ರಕ್ಕಸಗಿ-ತಂಗಡಗಿ ಯುದ್ಧಕ್ಕೆ ಹೋಗುವಾಗ ಇಲ್ಲಿ ತಂಗಿದ್ದರು. ಆದ್ದರಿಂದ ಆ ಸ್ಥಳಕ್ಕೆ "ಪಾಲಿಕಾದೇವಿ" ಎಂಬ ಹೆಸರಿನ ಗುಡಿಯನ್ನು ಕಟ್ಟಿಸಿದ್ದಾರೆ. ಹಾಗೂ ಈ ಗ್ರಾಮದಲ್ಲಿ ಒಂದು ವೀರಗಲ್ಲು ಮಹಾಂತೇಶ ಮಠದ ಹತ್ತಿರ ಇಡಲಾಗಿದೆ.

**ಸ್ಥಳ ಐತಿಹ್ಯ :**

ಈ ಊರಿಗೆ ಮೊದಲು ಕರಡಿ ಪೂರವೆಂದು ಕರೆಯುತ್ತಿದ್ದರು. ಇಲ್ಲಿಯ ಜನಪದಿಯ ಮಾತಿನಲ್ಲಿ ಹೇಳುವದಾದರೆ ಈ ಊರಿನಲ್ಲಿ ಒಬ್ಬ ಹೆಣ್ಣುಮಗಳು ದಿನಾಲು ಬೆಳಗಿನ ಜಾವದಲ್ಲಿ ತಿಪ್ಪಿಗೆ ಕಸವನ್ನು ಹಾಕುತ್ತಿದ್ದಳು ಅದು ಯಾವಾಗಲು ಕಸವು ಚೆಲ್ಲ್ಯಾಪಿಲ್ಲಿ ಆಗುತಿತ್ತ ಇದನ್ನು ಕಂಡು ಆ ಹೆಣ್ಣು ಮಗಳ ಮಾವ ಬೆಳಗಿನ ಜಾವ ಕಸಹಾಕಿದ ನಂತರ ಅಲ್ಲಿ ತನ್ನ ದೃಷ್ಠಿಯನ್ನು ಹರಿಸುತ್ತಾನೆ ಆಗ ಕರಡಿಯಾಕಾರದ ಮೈಬಣ್ಣವಿರುವ ಈ ಬಸವಣ್ಣನ್ನು ನೋಡುತ್ತಾನೆ. ಆಗ ಕರಡಿ-ಕರಡಿಯೆಂದು ಊರಿನ ಜನರಿಗೆ ತಿಳಿಸುತ್ತಾನೆ. ಎಲ್ಲರೂ ಬಂದು ನೋಡಲಾಗಿ ಅದು ಬಸವಣ್ಣನ ಮೂರ್ತಿಯಾಗಿರುತ್ತದೆ. ಹೀಗಾಗಿ ಈ ಊರಿಗೆ ಕರಡಿ ಎಂಬ ಹೆಸರು ಬಂದಿತು ಎಂಬುದು ಇಲ್ಲಿನ ಹಿರಿಯರ ಹೇಳಿಕೆ.

**ವಾಸ್ತುಕಲೆ :**

ಕರಡಿ ಗ್ರಾಮದಲ್ಲಿಯ ದೇವಾಲಯಗಳ ವಾಸ್ತುವಿನ ವಿನ್ಯಾಸವು ಚಾಲುಕ್ಯ ಶೈಲಿಯ ಕಟ್ಟಡಗಳಾಗಿವೆ. ಬಸವೇಶ್ವರ ದೇವಾಲಯಗಳು ಪ್ರಾಚೀನ ದೇವಾಲಯವಾಗಿವೆ. ಇವುಗಳ ವಾಸ್ತು ಉತ್ಕೃಷ್ಟವಾಗಿದೆ. ಸ್ತಂಭಗಳು ವಿಶಿಷ್ಟವಾದ ರೀತಿಯಲ್ಲಿ ನುಣುಪಾಗಿದೆ.

| | | | |
|---|---|---|---|
| ೧. | **ದೇವಾಲಯ** | : | **ಬಸವೇಶ್ವರ** |
| | ಶಿಲ್ಪ | : | ನಂದಿ ವಿಗ್ರಹ |
| | ದಿಕ್ಕು | : | ಉತ್ತರಾಭಿಮುಖ |
| | ಭಂಗಿ | : | ಕುಳಿತ ಭಂಗಿ |
| | ಕಾಲ | : | ೧೧ನೇ ಶತಮಾನ |

ಶಿಲೆ : ಬಳಪಕಲ್ಲು

ಅಳತೆ : ಎತ್ತರ - ೫ ಫೂಟ

ಅಗಲ - ೪ ಫೂಟ

ಸ್ಥಿತಿ : ಸುಸ್ಥಿತಿ

**ಶಿಲ್ಪದ ವಿವರಣೆ :**

ಕರಡಿ ಗ್ರಾಮದಲ್ಲಿ ಸುಪ್ರಸಿದ್ಧ ಖ್ಯಾತಪಡೆದಿರುವ ಈ ಕರಡಿ ಬಣ್ಣದ ಬಸವಣ್ಣ ಮೂಲತಃ ಉದ್ಭವ ಮೂರ್ತಿಯಾಗಿದೆ. ಈ ದೇವಾಲಯದ ಗರ್ಭಗೃಹದಲ್ಲಿರುವ ಈ ನಂದಿವಿಗ್ರಹ ಕಪ್ಪುಶಿಲೆಯಾಗಿದೆ. ಈ ದೇವಾಲಯ ಪ್ರಾಚೀನ ದೇವಾಲಯವಾಗಿದೆ. ಈ ಬಸವನ ಭಂಗಿಯು ಕುಳಿತಿದ್ದು ಇದರ ಕಾಲು ಒಂದು ಮುಮುದೆ ಚಾಚಿರುತ್ತದೆ. ಇನ್ನೊಂದು ಕಾಲನ್ನು ಮಡಿಚಿರುತ್ತದೆ. ಹಿಂದಿನ ಕಾಲನ್ನು ತನ್ನ ಉದರದೊಳಗೆ ಇಟ್ಟುಕೊಂಡಿದೆ.

ಈ ದೇವಾಲಯದ ಎದುರಿಗೆ ಗರಡ ಸ್ತಂಭವಿದೆ. ಚಾಲುಕ್ಯ ಶೈಲಿಯ ೧೨ ಸ್ತಂಭಗಳು ಇದ್ದು ಈ ಕಂಭಗಳು ವೃತ್ತಾಕಾರವಾಗಿದ್ದು ಅದರ ಸುತ್ತಲೂ ನಾಗಸರ್ಪನ ಶಿಲ್ಪವು ಆವರಿಸಿದೆ. ಈ ದೇವಾಲಯದ ಜಾತ್ರೆ ಯುಗಾದಿ ನಂತರ ದಶಮಿಯ ತಿಥಿಯ ದಿವಸ ನಡೆಯುತ್ತದೆ.

**ಶಿಲ್ಪದ ಆಭರಣಗಳು :**

, ಕುಳಿ ಭಂಗಿಯಲ್ಲಿರುವ ಬಸವ ಕೊಂಬಿಗ ಕೊಂಬಣಸ್, ಕೊರಳಿಗೆ ಹಾರ, ಹಣೆಗೆ ಹಣೆಪಟ್ಟಿ, ಕಾಲಿಗೆ ಕಾಲ್ಗಡಗ, ಕೊರಳಲ್ಲಿ ಗೆಜ್ಜೆಸರ ಇವೆಲ್ಲ ಆಭರಣಗಳಿಂದ ಅಲಂಕೃತಗೊಂಡ ಬಸವನ ವಿಗ್ರಹ ಸುಂದರವಾಗಿದೆ.

**ದೇವಾಲಯ : ನೆಲಗುಡಿ ಬಸವಣ್ಣ**

ಮೂರ್ತಿ : ಈಶ್ವರ ಲಿಂಗ

ದಿಕ್ಕು : ಪೂರ್ವಾಭಿಮುಖ



ಕಾಲ : ೧೦ನೇ ಶತಮಾನ

ಶಿಲೆ : ಬಿಳಿ ಗ್ರಾನೈಟ್ ಶಿಲೆ

ಸ್ಥಳ : ಗರ್ಭಗೃಹ

ಶೈಲಿ : ಚಾಲುಕ್ಯ ಶೈಲಿ

ಅಳತೆ : ಎತ್ತರ - ೫೫ ಸೆಂ.ಮೀ

ಅಗಲ - ೮೦ ಸೆಂ.ಮೀ.

ಸ್ಥಿತಿ : ಸುಸ್ಥಿತಿ

**ಶಿಲ್ಪದ ವಿವರಣೆ :**

ಈ ಶಿವಲಿಂಗವು ಬಸವಣ್ಣನ ನೆಲಗುಡಿಯ ಗರ್ಭಗೃಹದ ಎತ್ತರವಾದ ಯೋನಿಯ ಪೀಠದ ಮೇಲೆ ಇದೆ. ಇದರ ಜಲಹರಿಯು ಉತ್ತರ ದಿಕ್ಕಿಗೆ ಇರುತ್ತದೆ. ಈ ಲಿಂಗದ ಗಾತ್ರ ದೊಡ್ಡದಿದೆ. ಚಾಲುಕ್ಯ ಶೈಲಿಯ ೨೨ ಸ್ತಂಭಗಳಿವೆ. ಈ ಗುಡಿಯ ಒಳಗೆ ಒಂದು ಗುಹೆ ಇದೆ. ಇದು ೨ ಕಿ.ಮೀ. ದೂರದಲ್ಲಿರುವ ಪಾಲತಿಗೆ ಮತ್ತು ಕರಡಿಯ ನೆಲಗುಡಿ ದೇವಾಲಯಕ್ಕೆ ದಾರಿ ಇದೆ ಎಂದು ಇಲ್ಲಿ ಹಿರಿಯರ ಹೇಳಿಕೆ ಈ ಗರ್ಭಗುಡಿಯ ಒಳಾಂಗಣದ ಎಡಗೋಡೆಯಲ್ಲಿ ಗಣಪ, ನಾಗಮೂರ್ತಿಗಳು ಇವೆ. ಈ ಈಶ್ವರ ಲಿಂಗ ಎದುರಿಗೆ ವೃಷಣ ಮೂರ್ತಿ ಇದ್ದು ಇದು ಕುಳಿ ಭಂಗಿಯಲ್ಲಿದೆ.

| | | |
|---|---|---|
| **೨. ದೇವಾಲಯ** | : | **ಸಂಗಮೇಶ್ವರ** |
| ಮೂರ್ತಿ | : | ಈಶ್ವರ ಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೨ನೇ ಶತಮಾನ |
| ಶಿಲೆ | : | ಬಿಳಿ ಗ್ರಾನೈಟ್ ಶಿಲೆ |
| ಶೈಲಿ | : | ಚಾಲುಕ್ಯ ಶೈಲಿ |
| ಅಳತೆ | : | ಎತ್ತರ - ೬೦ ಸೆಂ.ಮೀ |
| | | ಅಗಲ - ೯೦ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಶಿಲ್ಪದ ವಿವರಣೆ :-**

'ಈ ದೇವಾಲಯವು ಊರ ಹೊರಗೆ ಇರುತ್ತದೆ. ಇದು ಪ್ರಾಚೀನ ದೇವಾಲಯವಾಗಿದ್ದು ಚಾಲುಕ್ಯ ಶೈಲಿಯಲ್ಲಿರುವ ಈ ಗುಡಿಗೆ ೨೨ ಸ್ತಂಭಗಳಿವೆ. ಈ ಗುಡಿಯ ಗರ್ಭಗೃಹದಲ್ಲಿ ಈಶ್ವರಲಿಂಗ ಇದ್ದು ಇದರ ಎದುರಿಗೆ ವೃಷಭ ಇರುತ್ತದೆ. ದೇವಾಲಯದ ಎದುರಿಗೆ ಗರುಡ ಸ್ತಂಭ ಇರುತ್ತದೆ. ದೇವಾಲಯದ ಒಳ ಗೋಡೆಯಲ್ಲಿ ಎಡ ಮತ್ತು ಬಲಕ್ಕೆ ಮೂರ್ತಿ ಕೋಷ್ಠಗಳಿವೆ. ಈ ಈಶ್ವರಲಿಂಗ ಕಪ್ಪು ಶಿಲೆಯಿಂದ ಮಾಡಿದ್ದಾಗಿದೆ. ಕಾರ್ತಿಕಮಾಸದಲ್ಲಿ ಇಲ್ಲಿ ಈ ದೇವಾಲಯದ ಉತ್ಸವ ನಡೆಯುತ್ತದೆ.

**3. ಜೈನಬಸದಿ :**

| | | |
|---|---|---|
| ಮೂರ್ತಿ | : | ವಿಷ್ಣು ನಾರಾಯಣ |
| ಭಂಗಿ | : | ನಿಂತ ಭಂಗಿ |
| ಸ್ಥಳ | : | ಗರ್ಭಗೃಹದ ಒಳ ಬಾಗಿಲ ಬಲಭಾಗದಲ್ಲಿ |
| ಕಾಲ | : | ೧೦ನೇ ಶತಮಾನ |
| ಶಿಲೆ | : | ಬಿಳಿ ಶಿಲೆ |
| ಶೈಲಿ | : | ಪಲ್ಲವ ಶೈಲಿ |
| ಪರಿವಾರ | : | ಶ್ರೀದೇವಿ (ಲಕ್ಷ್ಮೀ) |
| | | ಎಡಭಾಗದಲ್ಲಿ ನಿಂತ ಭಂಗಿ |
| | | ಬಲಭಾಗದಲ್ಲಿ ಭೂಮಿ(ನೀಲಾ) |
| | | ಪದ್ಮಕಟಕ ಮುದ್ರೆಯಲ್ಲಿ ನಿಂತಿದ್ದಾರೆ |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವಿವರಣೆ :**

ಈ ಜೈನಬಸದಿ ಕರಡಿ ಗ್ರಾಮದಲ್ಲಿ ನಡು ಊರಿನಲ್ಲಿ ಇದೆ. ಇದು ಈಗ ದುಃಸ್ಥಿತಿಯಲ್ಲಿದೆ. ಇದು ಈಗ ಜೈನಬಸದಿಯಂತೆ ಕಾಣದೆ ಊರ ಮನೆಯವರು ಉಪಯೋಗಿಸುವ ಕಟ್ಟಿಗೆ ಹಾಕುವ ಮನೆಯಾಗಿದೆ. ಗರ್ಭಗೃಹದಲ್ಲಿ ಯಾವುದೇ ಮೂರ್ತಿ ಇಲ್ಲಾ. ಆದರೆ ಗರ್ಭಗೃಹದ ಬಾಗಿಲಿನ ಎಡ ಮತ್ತು ಬಲ ಗೋಡೆಯಲ್ಲಿ ಈ ವಿಷ್ಣುವಿನ ಮೂರ್ತಿಗಳನ್ನು ನಿರ್ಮಿಸಿದ್ದಾರೆ.

ವಿಷ್ಣು ನಾರಾಯಣ ಮೂರ್ತಿಯು ಸ್ಥಾನಿಕ ಭಂಗಿಯಲ್ಲಿದ್ದು ವಿಷ್ಣು ಚತುರ್ಭುಜನಾಗಿದ್ದು ಆದಿಶೇಷನ ಪ್ರಭಾವಳ ಇದೆ. ಶಿರಕ್ಕೆ ಕಿರೀಟ, ಮುಕುಟ, ಬಲಗೈಮೇಲಿನ ಕೈಯಲ್ಲಿ ಶೂಲ, ಕೆಳಗಿನ ಕೈಯಲ್ಲಿ ಗದೆ, ಎಡಗೈ ಮೇಲಿನ ಕೈಯಲ್ಲಿ ಪದ್ಮ ಇರುತ್ತದೆ. ವಿಷ್ಣುವಿನ ಎಡಭಾಗದಲ್ಲಿ ಶ್ರೀದೇವಿ (ಲಕ್ಷ್ಮೀ) ಬಲಭಾಗದಲ್ಲಿ ಭೂಮಿ (ನೀಲಾ) ಪದ್ಮ ಕಟಕ ಮುದ್ರೆಯಲ್ಲಿ ನಿಂತಿದ್ದಾರೆ. ಈ ಮೂರ್ತಿಗಳ ಕೊರಳಲ್ಲಿ ಹಾರ, ಕಾಲಲ್ಲಿ ಕಾಲ್ಗಡಗ ಕೈಯಲ್ಲಿ ಕೈಗಡಗ ನಡಪಟ್ಟಿ ಧರಿಸಿದ್ದಾರೆ. ಒಟ್ಟಿನಲ್ಲಿ ಈ ಮೂರ್ತಿ ಆಭರಣಗಳಿಂದ ಅಲಂಕೃತಗೊಂಡ ಸುಂದರವಾದ ವಿಗ್ರಹವಾಗಿದೆ.

**ಮೂರ್ತಿಯ ಆಭರಣಗಳು :**

ಈ ವಿಷ್ಣುವಿನ ಮೂರ್ತಿಗೆ ಶಿರಕ್ಕೆ ಕಿರೀಟ ಮುಕುಟ, ಕೊರಳಿಗೆ ಹಾರ, ಕೈಗಡಗ, ಕಾಲ್ಗಡಗ ಧರಿಸಿದ್ದಾನೆ.

**ಆಯುಧಗಳು :**

ಬಲಗೈಯಲ್ಲಿ ಶೂಲ, ಗದೆ, ಎಡಗೈಯಲ್ಲಿ ಶಂಖ, ಪಾನ ಪಾತ್ರೆ ಇವು ಈ ಮೂರ್ತಿಯ ಆಯುಧಗಳಾಗಿವೆ.

## ವೀರಗಲ್ಲು

| | | | | | |
|---|---|---|---|---|---|
| ಗ್ರಾಮ | : | ಕರಡಿ | ಕಾಲ | : | ಪ್ರಾಚೀನ |
| ಶಿಲ್ಪ | : | ವೀರಗಲ್ಲು | ಸ್ಥಿತಿ | : | ಸುಸ್ಥಿತಿ |
| ಸ್ಥಳ | : | ಮಹಾಂತೇಶ ಮಠದ ಮುಂದೆ ಇದೆ. | | | |

**ವೀರಗಲ್ಲಿನ ದೃಶ್ಯ ವಿವರಣೆ :**

ಈ ವೀರಗಲ್ಲು ಕರಡಿ ಗ್ರಾಮದ ಮಹಾಂತೇಶ ಮಠದ ಹತ್ತಿರ ಇದೆ. ಇದರ ಮೇಲೆ ಕಟ್ಟೆಗೆ ಹಾಕಿ ಮುಚ್ಚಿದ್ದರು. ನಾನು ಕ್ಷೇತ್ರ ಕಾರ್ಯಕ್ಕೆ ಹೋದಾಗ ಆ ವೀರಗಲ್ಲಿನ ದೃಶ್ಯವಿವರಣೆಯನ್ನು ಆ ಊರಿನ ಜನರಿಗೆ ತಿಳಿಸಿ ಅದರ ಮೇಲಿನ ಕಟ್ಟೆಗೆಯನ್ನು ತೆಗೆದು ನೀರಿನಿಂದ ಸ್ವಚ್ಛವಾಗಿ ತೊಳೆದು ಅದನ್ನು ನಿಲ್ಲಿಸಿ ಛಾಯಾಚಿತ್ರವನ್ನು ತೆಗೆದುಕೊಂಡು ಬಂದಿದ್ದೇನೆ.

ಈ ವೀರಗಲ್ಲು ಮೂರು ಪಟ್ಟಿಯನ್ನು ಹೊಂದಿದೆ.

**ಮೊದಲನೆಯ ಪಟ್ಟಿ :** ಕೆಳಗಿನ ಪಟ್ಟಿಯಲ್ಲಿ ವೀರ ಮತ್ತು ವಿರೋಧಿಗಳು ಯುದ್ಧದಲ್ಲಿ ಹೋರಾಡುತ್ತಿರುವ ದೃಶ್ಯ ಅವರ ಕೈಯಲ್ಲಿ ಬಿಲ್ಲುಬಾಣ, ಗರಾಣೆ, ಖಡ್ಗ ಹಿಡಿದು ಯುದ್ಧ ಮಾಡುವ ದೃಶ್ಯ ಇರುತ್ತದೆ.

**ಎರಡನೇ ಪಟ್ಟಿ :** ಮಧ್ಯದ ಪಟ್ಟಿಕೆಯಲ್ಲಿ ಯುದ್ಧದಲ್ಲಿ ಸಾವನೊಪ್ಪಿದ ವೀರನನ್ನು ಮೂವರು ಅಪ್ಸರೆಯರು ಕರೆದುಕೊಂಡು ಹೋಗುವ ದೃಶ್ಯವಿದೆ.

**ಮೂರನೇ ಪಟ್ಟಿ :** ಮೇಲಿನ ಪಟ್ಟಿಯಲ್ಲಿ ಒಬ್ಬ ಸ್ತ್ರೀ ಲಿಂಗ ಪೂಜೆ ಮಾಡುತ್ತಿರುವ ದೃಶ್ಯ ಪಕ್ಕದಲ್ಲಿ ಕೈಮುಗಿದು ಕುಳಿತಿರುವ ಚಿತ್ರವಿದೆ. ಅಂದರೆ ವೀರನು ಯುದ್ಧದಲ್ಲಿ ಸಾವನೊಪ್ಪಿ ಲಿಂಗೈಕ್ಯದ ದೃಶ್ಯವೆಂದು ಕಂಡು ಬರುತ್ತದೆ.

**ಶಿಲ್ಪದ ವೈಶಿಷ್ಟ್ಯ :**

ಕರಡಿ ಗ್ರಾಮವು ಪುರಾತನವಾದದು. ಈ ಗ್ರಾಮದಲ್ಲಿ ಪ್ರಾಚೀನ ಕಾಲದ ಸುಪ್ರಸಿದ್ಧವಾದ ನಾಲ್ಕುದೇವಾಲಯಗಳಿವೆ. ಇವು ಶಿಲ್ಪಕಲಾ ಪ್ರಪಂಚದಲ್ಲಿಯೇ ಪ್ರಸಿದ್ಧಿ ಪಡೆದಿವೆ. ಬಸವೇಶ್ವರ ದೇವಾಲಯದ ಸ್ತಂಭಗಳು ಆದಿಶೇಷನ ಶಿಲ್ಪದಿಂದ ಆವೃತವಾಗಿವೆ. ಇದು ಈ ಗುಡಿಯ ವಿಶಿಷ್ಟತೆ ಹಾಗೂ ಬಸವನ ಮೂರ್ತಿ೫ ಪೂಟ ಎತ್ತರವಿದೆ. ಇದು ಅಪರೂಪ. ನೆಲಗುಡಿ ಬಸವಣ್ಣ ದೇವಾಲಯದ ಮುಖ ಮಂಟಪದಲ್ಲಿ ೨೨ ವಿಶಿಷ್ಟ ಚಾಲುಕ್ಯ ಶೈಲಿಯ ಸ್ತಂಭಗಳಿವೆ. ಸಂಗಮೇಶ್ವರ ದೇವಾಲಯದಲ್ಲಿ ಮುಖ ಮಂಟಪಗಳು ವಿಶಿಷ್ಟವಾಗಿವೆ. ಜೈನ ಬಸದಿಯಲ್ಲಿ ವಿಷ್ಣು ನಾರಾಯಣ ಮೂರ್ತಿಯು ಶಿಲ್ಪಕಲೆ ಸುಂದರವಾಗಿ ಕೆತ್ತಿದ್ದು ಇದು ಅಪರೂಪ ಹಾಗೂ ಇಲ್ಲಿ ವೀರಗಲ್ಲು ಮೂರು ಪಟ್ಟಿಕೆಯನ್ನು ಹೊಂದಿದ್ದು ಇದು ಈ ಊರಿನಲ್ಲಿ ಬಾಣಂತಿಕಲ್ಲು ಎಂದು ಬಿಸಾಡಿದ್ದರು. ಇದು ಸುಸ್ಥಿತಿಯಲ್ಲಿರಿಸಲಾಗಿದೆ.

ಇವೆಲ್ಲ ದೇವಾಲಯಗಳು ಚಾಲುಕ್ಯ ಶೈಲಿಯಲ್ಲಿ ನಿರ್ಮಾಣವಾಗಿವೆ. ಒಟ್ಟಿನಲ್ಲಿ ಕರಡಿ ಗ್ರಾಮದಲ್ಲಿ ಸುಂದರವಾದ ಶಿಲ್ಪಕಲೆ ಜೀವಂತ ಸಾಕ್ಷಿಯಾಗಿವೆ.

# ೮- ಇಲಕಲ್

ಜಿಲ್ಲೆ : ಬಾಗಲಕೋಟ

ತಾಲೂಕು : ಹುನಗುಂದ

ನಗರ : ಇಲಕಲ್

ಹೋಬಳಿ : ಇಲಕಲ್

ಮಾರ್ಗ : ಬಿಜಾಪೂರ-ಬೆಂಗಳೂರು

ಜನವಸತಿ : ೫೦,೦೦೦

**ಸ್ಥಳ ಪರಿಚಯ :**

ಹುನಗುಂದ ದಕ್ಷಿಣಕ್ಕೆ ೧೨ ಕಿ.ಮೀ ದೂರದಲ್ಲಿರುವ ಇದು ಬಾಗಲಕೋಟೆ ಜಿಲ್ಲೆಯಲ್ಲಿ ದೊಡ್ಡನಗರವಾಗಿದೆ. ಇಲ್ಲಿ ನಗರಸಭೆ ಇರುತ್ತದೆ. ಇಲ್ಲಿಯ ಕೋಟೆ-ಗೋಡೆಯಲ್ಲಿ ಈಸ್ಟ ಇಂಡಿಯಾ ಕಂಪನಿಯ ಎರಡು ಶಿಲಾಶಾಸನಗಳಿವೆ. ಇವು ಕ್ರಿ.ಶ. ೧೮ನೇ ಶತಮಾನಕ್ಕೆ ಸಂಬಂಧಿಸಿವೆ. ಹಾಗೂ ಪ್ರಾಚೀನ ಕಾಲದ ದೇವಾಲಯಗಳಾದ ವೆಂಕೋಬ,ಮಲ್ಲಿಕಾರ್ಜುನ, ಬನಶಂಕರಿ, ಬಸವಣ್ಣ ಈ ದೇವಾಲಯಗಳು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿದೆ. ಇವು ಚಾಲುಕ್ಯ ಶೈಲಿಯ ದೇವಾಲಯಗಳಾಗಿವೆ.

ಈ ಇಲಕಲ್ ನಗರವು ಶೈಕ್ಷಣಿಕ, ಆರ್ಥಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿದೆ. ಇಲಕಲ್‌ನಲ್ಲಿ ಚಿತ್ತರಗಿ ಶ್ರೀ ವಿಜಯ ಮಹಾಂತೇಶ ಮಠವು ಪ್ರಸಿದ್ಧಿ ಹೊಂದಿದೆ. ಇದು ಕ್ರಿ.ಶ. ೧೫ನೇ ಶತಮಾನದಲ್ಲಿಸ್ಥಾಪಿತವಾಗಿದೆ. ಈ ನಗರದಲ್ಲಿ ೬೮೪ ಮಗ್ಗಗಳು ಇವೆ. ಇದರಿಂದ ಇಲಕಲ್ ಸೀರೆ ಪ್ರಸಿದ್ಧಿಪಡೆದಿವೆ.

ಇಲಕಲ್ ನಗರ ಸುತ್ತಮುತ್ತ ಪಿಂಕ್ ಗ್ರಾನೈಟ್ ಕಂಪನಿಗಳು ವ್ಯಾಪಿಸಿವೆ. ಇದರಿಂದ ಗ್ರಾನೈಟ್ ಕಲ್ಲಿಗಾಗಿ ಈ ನಗರ ಪ್ರಸಿದ್ಧಿ ಪಡೆದಿದೆ.

ಇಲ್ಲಿಯ ಸೈಯದ ಮುರ್ತುಜಾ ಖಾದರಿ ದರ್ಗಾವು ಪ್ರಸಿದ್ಧಿ ಪಡೆದಿದೆ.

**ಸ್ಥಳ ಐತಿಹ್ಯ :**

'ಇಲಕಲ್ ನಗರದ ಹೆಸರು ಜಾನಪದಿಯ ಮೂಲವಾಗಿದೆ. ಈ ಕಲ್ಲು ಇಲ್ಲಿನ ಕಲ್ಲು ಇಳಕಲ್ಲು ಇಲಕಲ್ಲ ಹೀಗೆ ಇಲಕಲನ ಹೆಸರು ಪರಿವರ್ತನೆಯಾಗಿ ಇಲಕಲ್ ಎಂಬ ಹೆಸರು ಬಂದಿರುತ್ತದೆ. ಯಾಕೆಂದರೆ ಇಲ್ಲಿ ಸುತ್ತ ಮುತ್ತಲಿನಲ್ಲಿ ಗ್ರಾನೈಟ್‌ಕಲ್ಲು ಸಿಗುವದರಿಂದ ಹಾಗೂ ಹೆಚ್ಚಿಗೆ ಕಲ್ಲುಗಳು ದೊರೆಯುವದರಿಂದ ಇದಕ್ಕೆ ಇಲಕಲ್ ಎಂಬ ಹೆಸರು ಬಂದಿದೆಯೆಂದು ಹೇಳಬಹುದು.

**ವಾಸ್ತುಕಲೆ :**

ಇಲ್ಲಿನ ವೆಂಕೋಬದೇವಾಲಯ ಬನಶಂಕರಿ ದೇವಾಲಯ, ಮಲ್ಲಿಕಾರ್ಜುನ ದೇವಾಲಯ, ಬಸವೇಶ್ವರ ದೇವಾಲಯಗಳ ಪ್ರಾಚೀನ ದೇವಾಲಯುಗಳು. ಇವುಗಳು ಚಾಲುಕ್ಯ ಶೈಲಿಯನ್ನು ಹೊಂದಿವೆ. ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿರುವ ಮೂರ್ತಿಗಳು ಕಪ್ಪು ಶಿಲೆಯಾಗಿದ್ದು ನುಣುಪಾಗಿ ಹೊಳೆಯುತ್ತವೆ. ವೆಂಕೋಬ ದೇವಾಲಯದ ಹೊರಗೋಡೆಯಲ್ಲಿ ವಿಷ್ಣುವಿನ ದಶವತಾರ ಮೂರ್ತಿಗಳು ಸುಂದರವಾಗಿ ಆಕರ್ಷಣೀಯವಾಗಿವೆ. ದೇವಾಲಯಗಳ ಕಲ್ಲು ಕೆಂಪು ಮಿಶ್ರಿತ ಉಸುಕು ಕಲ್ಲನ್ನು ಬಳಸಿದ್ದಾರೆ.

| | | |
|---|---|---|
| **೧. ದೇವಾಲಯ** | **:** | **ಲಕ್ಷ್ಮೀ ವೆಂಕಟರಮಣ** |
| ಮೂರ್ತಿ | : | ಲಕ್ಷ್ಮೀ ವೆಂಕಟರಮಣ |
| ಭಂಗಿ | : | ನಿಂತಭಂಗಿ |
| ದಿಕ್ಕು | : | ಉತ್ತರಾಭಿಮುಖ |

ಕಾಲ : ೧೦ನೇ ಶತಮಾನ
ಶಿಲೆ : ಕೆಂಪು ಮಿಶ್ರಿತ ಉಸುಕುಕಲ್ಲು
ಅಳತೆ : ಎತ್ತರ - ೭೦ ಸೆಂ.ಮೀ
ಅಗಲ - ೬೦ ಸೆಂ.ಮೀ
ಸ್ಥಿತಿ : ಸುಸ್ಥಿತಿ

**ಮೂರ್ತಿತಿಯ ವೈಶಿಷ್ಟ್ಯ :**

ಇಲಕಲ್ ನಗರದಲ್ಲಿ "ಗೊಂಬಿಗುಡಿ" ಎಂದು ಪ್ರಸಿದ್ಧಿ ಪಡೆದ ಈ ವೆಂಕೋಬ ದೇವಾಲಯ ಕ್ರಿ.ಶ. ೯ನೇ ಶತಮಾನದಲ್ಲಿ ಈ ದೇವಾಲಯ ನಿರ್ಮಿಸಿದ್ದಾರೆ. ಇದು ಚಾಲುಕ್ಯ ಶೈಲಿಯನ್ನು ಹೊಂದಿದೆ. ಇದರ ವಾಸ್ತುವನ್ನು ಐಹೋಳೆಯಿಂದ ತಂದು ಕಟ್ಟಿದ್ದಾರೆ. ಎಂಬುದು ಇಲ್ಲಿಯ ಹಿರಿಯರ ಹೇಳಿಕೆ. ಇದು ಜಕಣಾಚಾರಿ ಮತ್ತು ಡಕಣಾಚಾರಿ ಕಟ್ಟಡವೆಂದು ಹೇಳುತ್ತಾರೆ. ಈ ದೇವಾಲಯದ ಬಲ ಪಾರ್ಶ್ವದಲ್ಲಿ ವಿಷ್ಣುವಿನ ದಶವತಾರ ಮೂರ್ತಿಗಳು ಮನಮೋಹಕವಾಗಿವೆ. ಹಾಗೂ ಈ ಗುಡಿಯ ಎದುರಿಗೆ "ಕಲ್ಲಿನಗಂಟೆ " ಶಿಲ್ಪದಲ್ಲಿ ಕೆತ್ತಿದ್ದಾರೆ ಇದು ಇದರ ವೈಶಿಷ್ಟ್ಯ.

ಈ ದೇವಾಲಯದ ಗರ್ಭಗೃಹದಲ್ಲಿ ಚೌಕಾಕಾರವಾದ ಜಗಲಿಯ ಮೇಲೆ ವಿಷ್ಣುವಿನ ನಿಂತಭಂಗಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಈ ಮೂರ್ತಿಯು ಕಪ್ಪು ಶಿಲೆಯಾಗಿದೆ. ಇದಕ್ಕೆ ಪ್ರಭಾವಳಿ ಇರುತ್ತದೆ. ಸಾಮಾನ್ಯವಾಗಿ ವಿಷ್ಣು ಮೂರ್ತಿಗಳನ್ನು ಲಕ್ಷ್ಮೀದೇವಿಯೊಂದಿಗೆ ಇರಿಸುವ ಪದ್ಧತಿ ಸಾಮಾನ್ಯವಾಗಿದೆ. ಈ ವಿಷ್ನು ಮೂರ್ತಿಯೂ ಸ್ಥಾನಿಕವಾಗಿರುವದು. ಎಡಭಾಗದಲ್ಲಿ ಶ್ರೀದೇವಿ (ಲಕ್ಷ್ಮೀ) ಬಲಭಾಗದಲ್ಲಿ ಭೂಮಿ (ನೀಲಾ) ಇವರು ಪದ್ಮ ಕಟಕ ಮುದ್ರೆಯಲ್ಲಿದ್ದಾರೆ. ಈ ವಿಷ್ಣುವಿನ ಮೂರ್ತಿಯು ಸುಂದರವಾಗಿದ್ದು ಆಕರ್ಷಣೆಯಾಗಿದೆ. ತಲೆಗೆ ಕಿರೀಟ ಮುಕುಟ ಧರಿಸಿದ್ದಾನೆ. ಇತನಿಗೆ ನಾಲ್ಕು ಕೈಗಳಿವೆ. ಬಲಗೈಯಲ್ಲಿ ಪ್ರಯೋಗ ಚಕ್ರ ಮತ್ತು ಬಲಗೈಯ ಕೆಳಕ್ಕೆ ಅಭಯ ಹಸ್ತ ಮೇಲಿನ ಎಡಗೈ ಶಂಖ ಕೆಳಕ್ಕೆ ಸೊಂಟದ ಮೇಲೆ ಇದೆ. ನಡಪಟ್ಟಿಕೆಯನ್ನು ಧರಿಸಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲ ಕೈಯಲ್ಲಿ ಕೈಗಡಗ, ಕೊರಳಲ್ಲಿ ಹಾರ ಹಾಗೂ ಜನಿವಾರ ಧರಿಸಿದ್ದಾನೆ. ಹೀಗೆ ಈ ಲಕ್ಷ್ಮೀ ವೆಂಕಟರಮಣ ಮೂರ್ತಿಯು ಇಲಕಲ್ ನಗರದ ಪ್ರತಿಷ್ಠಿತ ವೈಷ್ಣವ ಧರ್ಮದ ಪ್ರತೀತ.

**ಮೂರ್ತಿಯ ಆಭರಣಗಳು :**

ಈ ಲಕ್ಷ್ಮೀ ವೆಂಕಟರಮಣ ಮೂರ್ತಿಗೆ ಆಭರಣಗಳು ಅಲಂಕೃತವಾಗಿವೆ. ಕಿರೀಟ ಮುಕುಟ, ಪ್ರಯೋಗ ಚಕ್ರ, ಶಂಖ, ಕೈಗಡಗ, ಕೊರಳಿಗೆ ಹಾರ, ಜನಿವಾರ, ನಡುಪಟ್ಟಿಕೆ, ವಸ್ತ್ರಾಭರಣ, ಕರ್ಣಕುಂಡಲ ಇವು ವಿಷ್ಣುವಿಗೆ ಇರುವ ಆಭರಣಗಳಾಗಿವೆ.

**ಭೋಗಿಶಯನ ಮೂರ್ತಿ :**

ಶಿಲ್ಪ : ಕಪ್ಪು ಶಿಲೆ
ದಿಕ್ಕು : ಪೂರ್ವಾಭಿಮುಖ
ಸ್ಥಳ : ಮಂಟಪ
ಭಂಗಿ : ಶಯನಭಂಗಿ
ಪರಿವಾರ : ಭೂದೇವಿ (ನೀಲಾ)ಶ್ರೀದೇವಿ
ಕಾಲ : ೯ನೇ ಶತಮಾನ
ಸ್ಥಿತಿ : ಸುಸ್ಥಿತಿ

| | | |
|---|---|---|
| ಸ್ವರೂಪ | : | ಉಬ್ಬು ಶಿಲ್ಪ |
| ಅಳತೆ | : | ಉದ್ದ - ೫೦ ಸೆಂ.ಮೀ |
| | | ಅಗಲ - ೩೦ ಸೆಂ.ಮೀ. |

**ಮೂರ್ತಿಯ ವೈಶಿಷ್ಟ್ಯ :**

ಇಲಕಲ್ ನಗರದಲ್ಲಿ ಸುಪ್ರಸಿದ್ಧಿ ಪಡೆದ ಈ ದೇವಾಲಯದಲ್ಲಿ ಶಯನಮೂರ್ತಿಯು ಆಕರ್ಷಣೆಯಾಗಿದೆ. ಆದರೆ ಇಂತಹ ಮೂರ್ತಿಗಳು ಜಲಶಾಯಿ ಅಥವಾ ರಂಗನಾಥ ಪ್ರಸಿದ್ಧವಾದುದು. ದೇವತಾ ಮೂತಿರಗಳಲ್ಲಿ ಶಯನಭಂಗಿಯವು ಪರೂಪವಾಗಿವೆ. ಈ ಮೂರ್ತಿ ಆದಿಶೇಷನ ಮೇಲೆ ಪವಡಿಸಿರುತ್ತದೆ.

ಈ ಮೂರ್ತಿಯ ಬಲಭಾಗದಲ್ಲಿ ಲಕ್ಷ್ಮೀ ಮತ್ತು ಭೂಮಿ ಪದ್ಮಕಟಕ ಮುದ್ರೆಯಲ್ಲಿ ನಿಂತಿದ್ದಾರೆ. ಈ ಮೂರ್ತಿಗೆ ಕಿರೀಟ ಮುಕುಟ, ಕರ್ಣಕುಂಡಲ, ಕೊರಳಹಾರ, ಕೈಗಡಗ, ಕಾಲ್ಗಡಗ, ನಡುಪಟ್ಟಿಕೆಯ ವಸ್ತ್ರಾಭರಣಗಳನ್ನು ಧರಿಸಿ ವಿಷ್ಣುವು ಶಯನಭಂಗಿಯಲ್ಲಿದ್ದಾನೆ.

**ಹಳೆಬನಶಂಕರಿ ದೇವಸ್ಥಾನ :**

| | | |
|---|---|---|
| ಮೂರ್ತಿ | : | ಬನಶಂಕರಿ |
| ಶಿಲೆ | : | ಬಳಪಕಲ್ಲು |
| ಸ್ಥಳ | : | ಗರ್ಭಗೃಹ |
| ಭಂಗಿ | : | ನಿಂತಭಂಗಿ |
| ಸ್ವರೂಪ | : | ಸಮ ಉಬ್ಬು ಶಿಲ್ಪ |
| ಕಾಲ | : | ೧೦ನೇ ಶತಮಾನ |
| ಅಳತೆ | : | ಎತ್ತರ - ೭೦ ಸೆಂ.ಮೀ |
| | | ಅಗಲ - ೬೫ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯ :**

ಈ ಹಳೆಬನಶಂಕರಿ ದೇವಸ್ಥಾನ ಪ್ರಾಚೀನ ದೇವಾಲಯವಾಗಿದೆ. ಈ ದೇವಾಲಯ ಚಾಲುಕ್ಯ ಶೈಲಿಯನ್ನು ಹೊಂದಿದ್ದು ಡಕಣಾಚಾರಿ ಕಟ್ಟಡವೆಂದು ಇಲ್ಲಿಯ ಜನರ ಹೇಳಿಕೆ. ಈ ದೇವಾಲಯಕ್ಕೆ ೧೮ ಸ್ತಂಭಗಳು ಇರುತ್ತವೆ. ಇಲ್ಲಿ ಈಶ್ವರಲಿಂಗ, ನಂದಿ, ಬನಶಂಕರಿ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾರೆ. ಇದು ಈ ದೇವಾಲಯದ ವೈಶಿಷ್ಟ್ಯ.

ಕಪ್ಪು ಶಿಲೆಯಿಂದ ಈ ಮೂರ್ತಿಯನ್ನು ಕೆತ್ತಲಾಗಿದ್ದು ನಿಂತ ಭಂಗಿಯಲ್ಲಿದ್ದು ಈ ಮೂರ್ತಿಗೆ ಪ್ರಭಾವಳಿ ಇದೆ. ಎರಡು ಕೈಗಳಿದ್ದು ಬಲಗೈಯಲ್ಲಿ ಶಂಖವನ್ನು ಎಡಗೈಯ ಅಭಯಹಸ್ತ ಮಾಡಿದ್ದಾರೆ. ತಲೆಗೆ ಕಿರೀಟ, ಮುಕುಟ, ಧರಿಸಿ ಸ್ಥಾನಿಕ ಭಂಗಿಯಲ್ಲಿದ್ದಾಳೆ. ಈ ಮೂರ್ತಿಯು ಗರ್ಭಗುಡಿಯಲ್ಲಿದೆ.

**ಮೂರ್ತಿಯ ಆಭರಣಗಳು :**

ಮಲ್ಲಿಕಾರ್ಜುನ ದೇವಾಲಯ ಇಲಕಲ್ ನಗರದಲ್ಲಿ ಪ್ರತಿಷ್ಠಿತ ಪ್ರಾಚೀನ ದೇವಾಲಯವಾಗಿದೆ. ಇದು ಇಲಕಲ್ ನಗರದ ಕಿಲ್ಲೆ ( ಹಳೆಯ ಊರು) ನಲ್ಲಿ ಇರುತ್ತದೆ. ಇವು ಚಾಲುಕ್ಯ ಶೈಲಿಯನ್ನು ಹೊಂದಿದ್ದು, ಈ ದೇವಾಲಯದ

ವಾಸ್ತುಶಿಲ್ಪ ಉತ್ಕೃಷ್ಟವಾದ ಕೆತ್ತನೆಯನ್ನು ಹೊಂದಿದೆ. ನಾಲ್ಕು ಸ್ತಂಭಗಳು ಇವೆ. ಈ ಗರ್ಭಗುಡಿಯ ಒಳಗೋಡೆಯ ಬಲಕ್ಕೆ ಈರಣ್ಣಾ, ನಾಗಪ್ಪ, ಗಣೇಶ ಮೂರ್ತಿಗಳು ಎಡಕ್ಕೆ ಪಾವರ್ತಿ, ಪರಮೇಶ್ವರ ಪ್ರತಿಷ್ಠಾಪನೆ, ಲಿಂಗದ ಎದುರಿಗೆ ನಂದಿ ಇರುತ್ತದೆ.

ಗರ್ಭಗುಡಿಯ ಚೌಕಾಕಾರದ ಪೀಠದ ಮೇಲೆ ಈಶ್ವರ ಮೂರ್ತಿಯನ್ನು ಕೆತ್ತಲಾಗಿದೆ. ಇದು ಕಪ್ಪು ಶಿಲೆಯಾಗಿದ್ದು ಪೂರ್ವಾಭಿಮುಖವಾಗಿದೆ. ನಯವಾದ ಕೆತ್ತನೆಯಿಂದ ಈ ಮೂರ್ತಿಯು ಹೊಳೆಯುತ್ತದೆ. ಈ ಲಿಂಗದಲ್ಲಿ ಶಿವನ ಮನುಷ್ಯಕಾರದ ಮುಖಲಿಂಗವಾಗಿದ್ದರಿಂದ ಇದಕ್ಕೆ ಲಿಂಗೋದ್ಭವ ಮೂರ್ತಿಯೆಂದು ಕರೆಯುತ್ತಾರೆ. ಆದರೆ ಶಿವನ ಪೂಜೆಯೆಂದರೆ ಲಿಂಗ ಪೂಜೆಯೆ ಶಿವನ ಹಿನ್ನಲೆಯಲ್ಲಿ ಈ ಲಿಂಗವನ್ನು ಪೂಜಿಸುತ್ತಾರೆ.

ಈ ಈಶ್ವರ ಮೂರ್ತಿಯ ಎದುರಿಗೆ ನಂದಿಯು ಒಂದು ಕಾಲನ್ನು ಮುಂದೆಚಾಚಿ ಮತ್ತೊಂದು ಕಾಲನ್ನು ಮಡಚಿದ್ದಾನೆ. ಹಿಂದಿನ ಕಾಲುಗಳನ್ನು ತನ್ನ ಉದರದೊಳಗೆ ಇಟ್ಟುಕೊಂಡಿದ್ದಾನೆ.

**ಮೂರ್ತಿಯ ಆಭರಣಗಳು :**

ಶಿರಕ್ಕೆ ಜಟಾಮುಕುಟ, ಕೊರಳ ಹಾರ, ಕರ್ಣಕುಂಡಲ, ಧರಿಸಿ ಚೌಕಾಕಾರದ ಪೀಠದ ಮೇಲಿರುವ ಈ ಮುಖಲಿಂಗ ಸುಂದರವಾಗಿದೆ.

| | | |
|---|---|---|
| ೪. **ದೇವಾಲಯ** | : | **ಬಸವೇಶ್ವರ** |
| ಶಿಲ್ಪ | : | ಈಶ್ವರಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಸ್ಥಳ | : | ಗರ್ಭಗೃಹ |
| ಕಾಲ | : | ೧೨ನೇ ಶತಮಾನ |
| ಅಳತೆ | : | ಎತ್ತರ - ೭೫ ಸೆಂ.ಮೀ. |
| | | ಲಿಂಗದ ಸುತ್ತಳತೆ - ೬೦ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಲಿಂಗದ ವಿವರಣೆ :**

ಈ ದೇವಾಲಯ ಕಲ್ಯಾಣಿ ಚಾಲುಕ್ಯ ವಾಸ್ತುಶಿಲ್ಪವನ್ನು ಪ್ರತಿಬಿಂಬಿಸುತ್ತದೆ. ಈ ದೇವಾಲಯದ ಗರ್ಭಗೃಹದಲ್ಲಿ ಈಶ್ವರ ಲಿಂಗ ಎತ್ತರವಾದ ಯೋನಿಯ ಪೀಠದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಈ ಲಿಂಗವು ಕಪ್ಪು ಶಿಲೆಯಾಗಿದೆ. ಈ ಈಶ್ವರ ಲಿಂಗದ ಎದುರಿಗೆ ವೃಷಭ ಇದೆ. ಇದು ಶಿವನ ಸಂಕೇತವಾಗಿದೆ. ಈ ದೇವಾಲಯದ ಎಡಭಾಗದಲ್ಲಿ ಗರಡಿ ಮನೆ ಇರುತ್ತದೆ. ಚಾಲುಕ್ಯ ಶೈಲಿಯ ಸ್ತಂಭವನ್ನು ಹೊಂದಿರುವ ದೇವಾಲಯವು ಸುಂದರವಾಗಿ ಆಕರ್ಷಣೆಯಾಗಿದೆ. ಪ್ರತಿವರ್ಷ ಹೋಸ್ತಿಲ ಹುಣ್ಣಿಮೆ ದಿವಸ ಈ ದೇವಾಲಯದ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ.

# ೯- ಹೇರೂರು

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ನಂದವಾಡಗಿ - ಇಲಕಲ್ |
| ತಾಲೂಕು | : | ಹುನಗುಂದ | ಜನಸಂಖ್ಯೆ | : | ೧೫೦೦ |
| ಗ್ರಾಮ | : | ಹೇರೂರು | ಹೋಬಳಿ | : | ಇಲಕಲ್ |

**ವೀರಗಲ್ಲಿನ ದೃಶ್ಯ ವಿವರಣೆ :**

ಈ ಗ್ರಾಮವು ಇಲಕಲ್‌ದಿಂದ ೫ ಕಿ.ಮೀ ದೂರದಲ್ಲಿದೆ. ಹುನಗುಂದ ತಾಲೂಕಿನ ಚಿಕ್ಕ ಗ್ರಾಮವಾಗಿದೆ. ಈ ಊರಿನ ಮುಂದೆ ಒಂದು ಹಳ್ಳ ಹರಿಯುತ್ತದೆ. ಇಲ್ಲಿ ಪ್ರಾಚೀನ ಕಾಲದ ದೇವಾಲಯಗಳು, ಶಾಸನಗಳು, ಕೋಟೆಗೋಡೆಗಳು ಇರುತ್ತವೆ. ಈ ಗ್ರಾಮವು ಕಪ್ಪು ಮತ್ತು ಕೆಂಪು (ಮಸಾರಿ) ಮಿಶ್ರ ಭೂಮಿಯನ್ನು ಹೊಂದಿದೆ. ಇದರ ಸುತ್ತಲೂ ಕಲ್ಲು ಹಾಗೂ ಮಣ್ಣಿನಿಂದ ಮಿಶ್ರವಾದ ಎತ್ತರವಾದ ನೈಸರ್ಗಿಕ ದಿಬ್ಬಗಳಿವೆ. ವ್ಯವಸಾಯ ಮುಖ್ಯ ಕಸುಬಾಗಿದೆ.. ಗೋಧಿ, ಬಿಳಿಜೋಳ, ಹತ್ತಿ, ಶೇಂಗಾ, ಬೆಳೆಯುತ್ತಾರೆ. ಇಲ್ಲಿ ಸರಕಾರಿ ಪ್ರಾಥಮಿಕ ಶಾಲೆ ಇದೆ. ಹಾಗೂ ಈ ಗ್ರಾಮಕ್ಕೆ ಇಲಕಲ್‌ದಿಂದ ಬಸ್ಸಿನ ಸೌಕರ್ಯವಿದೆ. ಇಲ್ಲಿ ಮಹಾಂತೇಶ ಮಠ ಪ್ರಸಿದ್ಧಿ ಪಡೆದಿದೆ ಹಾಗೂ ಹನುಮಂತ ದೇವಾಲಯದ ಮುಂದೆ ಒಂದು ಶಾಸನವಿದೆ. ಹೀಗೆ ಈ ಗ್ರಾಮವು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿದೆ. ಇಲ್ಲಿ ಪ್ರಾಚೀನ ದೇವಾಲಯಗಳಾದ, ಸೋಮೇಶ್ವರದೇಗುಲ, ಅಮೃತಲಿಂಗೇಶ್ವರ ದೇಗುಲ, ಚೌಡೇಶ್ವರ ದೇವಾಲಯ ಐತಿಹಾಸಿಕ ಮಹತ್ವ ಪಡೆದಿವೆ. ಇಲ್ಲಿ ಸೋಮೇಶ್ವರ ಮೂರ್ತಿಯು ನೆಲದಡಿಯಲ್ಲಿತ್ತು. ಇತ್ತಿತ್ತಲಾಗಿ ಇದನ್ನು ಸಂಶೋಧಿಸಿದಾಗ ಅದರ ಕೆಳಗೆ ೬ ಸಾಲುಗಳ ಶಾಸನವಿದೆ. ಹಾಗೂ ಆ ಮೂರ್ತಿ ೧೧೭ ಸೆಂ.ಮೀ. ಎತ್ತರವಿದೆ. ಹಾಗೂ ನೆರೆಯ ಗ್ರಾಮವಾದ ಚಿನ್ನಾಪೂರ ಎಸ್.ಟಿ.ಯಲ್ಲಿ ಪಾರ್ಶ್ವನಾಥ ತೀರ್ಥಂಕರರ ಮೂರ್ತಿ ಸಿಕ್ಕಿದ್ದು ೭ ಸಾಲುಗಳ ಶಾಸನವಿದೆ. ಹೀಗೆ ಚಿನ್ನಾಪೂರು ಹಾಗೂ ಹೇರೂರು ಮೂರ್ತಿಶಿಲ್ಪಗಳು ವಿಶಿಷ್ಟ ರೀತಿಯ ಶಿಲ್ಪಗಳಾಗಿವೆ.

**ಸ್ಥಳ ಐತಿಹ್ಯ :**

ಈ ಗ್ರಾಮಕ್ಕೆ ಮೊದಲು ಹಿರಿಯೂರು, ಹೀರೆಯೂರ, ಹಿರೇಊರು, ಹೀರೂರು, ಹೀಗೆ ಗ್ರಾಮದ ನಾಮಾಂಕಿತ ಕರ್ಣೋಪಕರ್ಣವಾಗಿ ಕ್ರಮೇಣ ಹೇರೂರು ಆಗಿ ಪರಿವರ್ತನೆಯಾಯಿತು. ಇಲ್ಲಿ ಹೆಚ್ಚಿಯ ಪ್ರಾಚೀನ ಅವಶೇಷಗಳು ದೊರೆಯುವದರಿಂದ ಇದಕ್ಕೂ ಹೇರೂರ ಎಂಬ ಹೆಸರು ಬಂದಿದೆ ಎಂಬುದು ಊರಿನಿಂದ ಅಭಿಪ್ರಾಯವಾಗಿದೆ.

**ವಾಸ್ತುಕಲೆ :**

ಕಲಾಭಿಜ್ಞರ ಕಣ್ಮನಗಳಿಗೆ ಹಬ್ಬವನ್ನುಂಟು ಮಾಡುವ ಹೇರೂರಿನ ವಾಸ್ತಿಕಲೆ ವಿಶಿಷ್ಟವಾಗಿದೆ. ಸೋಮೇಶ್ವರ ದೇವಾಲಯ, ಅಮೃತಲಿಂಗೇಶ್ವರ ದೇವಾಲಯ ಸರಳ ವಾಸ್ತುಶೈಲಿಯನ್ನು ಹೊಂದಿವೆ. ಈ ದೇವಾಲಯಗಳು ಚಾಲುಕ್ಯ ಶೈಲಿಯನ್ನು ಒಳಗೊಂಡಿವೆ.

**1. ದೇವಾಲಯ : ಸೋಮೇಶ್ವರ**

ಮೂರ್ತಿ : ಸೋಮೇಶ್ವರ
ಶಿಲೆ : ಕಪ್ಪು ಶಿಲೆ
ದಿಕ್ಕು : ಪೂರ್ವಾಭಿಮುಖ
ಕಾಲ : ೧೭ನೇ ಶತಮಾನ
ಸ್ವರೂಪ : ಉಬ್ಬು ಶಿಲ್ಪ
ಭಂಗಿ : ನಂದಿಯ ಮೇಲೆ ಕುಳಿತ ಭಂಗಿ
ಅಳತೆ , : ಎತ್ತರ - ೧೧೦ ಸೆಂ.ಮೀ
ಅಗಲ - ೬೦ ಸೆಂ.ಮೀ.
ಸ್ಥಿತಿ : ಸುಸ್ಥಿತಿ

**ಮೂರ್ತಿಯ ವೈಶಿಷ್ಟ್ಯ :**

ಸೋಮೇಶ್ವರ ದೇವಾಲಯ ಹೇರೂರಿನಲ್ಲಿ ಪ್ರಸಿದ್ಧಿ ಪಡೆದ ದೇವಾಲಯವಾಗಿದೆ. ಇದು ಗರ್ಭಗೃಹ, ಅಂತರಾಳ, ಮುಖಮಂಟಪ ಹೊಂದಿದ್ದು ಚಾಲುಕ್ಯ ಶೈಲಿಯಲ್ಲಿದೆ. ಚೌಕಾಕಾರದ ಪೀಠದ ಮೇಲೆ ಈ ಸೋಮೇಶ್ವರ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಕಿರೀಟಾರಿಯಾದ ಪರಮೇಶ್ವರನು ನಂದಿ ವಿಗ್ರಹದ ಮೇಲೆ ಕುಳಿತಿದ್ದು ಆತನ ಹಿಂದೆ ತಂಗಿ ಚೆನ್ನವ್ವ ಕುಳಿತಿದ್ದಾಳೆ. ಶಿಲ್ಪಗಳು ಉಬ್ಬು ಶಿಲ್ಪವಾಗಿವೆ. ನುಣುಪಾಗಿದ್ದು ಆಕರ್ಷಕವಾಗಿದೆ. ಹಿಂದೆ ಪ್ರಭಾವಳಿ ಇರುತ್ತದೆ. ನಂದಿ ವಿಗ್ರಹ ನಿಂತ ಭಂಗಿಯಲ್ಲಿದ್ದು ದಕ್ಷಿಣಾಭಿಮುಖವಾಗಿದೆ. ಶಿಲ್ಪಕಲೆಯ ದೃಷ್ಟಿಯಿಂದ ಈ ಮೂರ್ತಿಯು ಆಕರ್ಷಮಯಾಗಿದೆ.

**ಆಭರಣಗಳು :**

ಶಿರಕ್ಕೆ ಕಿರೀಟ ಮುಕುಟ, ಕೊರಳಲ್ಲಿ ಹಾರ, ಸೊಂಟಕ್ಕೆ ನಡಪಟ್ಟಿ, ಕಾಲಲ್ಲಿ ಕಾಲ್ಗಡಗ, ಕೈಯಲ್ಲಿ ಕೈಗಡಗ, ಧರಿಸಿ ಸೋಮೇಶ್ವರ ನಂದಿಯ ಮೇಲೆ ಕುಳಿತಿದ್ದಾನೆ.

ಹಿಂದೆ ಕುಳಿತ ಚೆನ್ನಮ್ಮನು ತಲೆಗೆ ಕಿರೀಟ, ಕೊರಳಲ್ಲಿ ಹಾರ, ಕಿವಿಗೆ ಕರ್ಣಕುಂಡ, ನಡಕ್ಕೆ ನಡಪಟ್ಟಿ ಧರಿಸಿ ಶಿವನ ಹಿಂದೆ ಕುಳಿತಿದ್ದಾಳೆ.

**೨. ಮೂರ್ತಿ : ಚವಡೇಶ್ವರಿ**

ಮೂರ್ತಿ : ಚವಡೇಶ್ವರಿ
ದಿಕ್ಕು : ಪೂರ್ವಾಭಿಮುಖ
ಕಾಲ : ೧೬ನೇ ಶತಮಾನ
ಶಿಲೆ : ಕಪ್ಪು ಶಿಲೆ
ಸ್ವರೂಫ : ಸಮ ಉಬ್ಬು ಶಿಲ್ಪ
ಭಂಗಿ : ಸಿಂಹದ ಮೇಲೆ ಆಸೀನ
ಅಳತೆ : ಎತ್ತರ - ೮೦ ಸೆಂ.ಮೀ
ಅಗಲ - ೫೦ ಸೆಂ.ಮೀ.
ಸ್ಥಿತಿ : ಸುಸ್ಥಿತಿ

**ಮೂರ್ತಿಯ ವೈಶಿಷ್ಟ್ಯ :**

ಚವಡೇಶ್ವರಿ ದೇವಾಲಯ ಪೂರ್ವಾಭಿಮುಖವಾಗಿದ್ದು ಇದು ಸೋಮೇಶ್ವರ ಗುಡಿಯ ಬಲಭಾಗದಲ್ಲಿದೆ. ಇದು ಇತ್ತಿತ್ತಲಾಗಿ ನಿರ್ಮಿಸಿದ ದೇವಾಲಯವಾಗಿದೆ. ಆದರೆ ಗರ್ಭಗೃಹದಲ್ಲಿ ಎತ್ತರವಾದ ಚೌಕಾಕಾರದ ಪೀಠದ ಮೇಲೆ ಈ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಚವಡೇಶ್ವರಿ ಮೂರ್ತಿಯು ಸಿಂಹದ ಮೇಲೆ ಕುಳಿತಿದ್ದು ಸಿಂಹವು ನಿಂತ ಭಂಗಿಯಲ್ಲಿದೆ. ಇದು ಕಪ್ಪು ಶಿಲೆಯಾಗಿದ್ದು ಸಮ ಉಬ್ಬು ಶಿಲ್ಪವಾಗಿದೆ. ಹಿಂದೆ ಪ್ರಭಾವಳಿ ಇದೆ.

**ಮೂರ್ತಿಯ ಆಭರಣಗಳು** :

ಶಿರಕ್ಕೆ ಕಿರೀಟ ಮುಕುಟ, ನಡಕ್ಕೆ ನಡಪಟ್ಟಿ, ಕೊರಳಲ್ಲಿ ಹಾರ, ಕಂಠಾಭರಣ, ಕಾಲಲ್ಲಿ ಕಾಲ್ಗಡಗ, ಕೈಯಲ್ಲಿ ಕೈಗಡಗ ಧರಿಸಿ ಈ ಮೂರ್ತಿಯು ಸುಂದರವಾಗಿ ಕಾಣುತ್ತದೆ.

| | | |
|---|---|---|
| **3. ದೇವಾಲಯ** | **:** | **ಅಮೃತಲಿಂಗೇಶ್ವರ...** |
| ಮೂರ್ತಿ | : | ಈಶ್ವರಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ ' | : | ಎತ್ತರ - ೭೦ ಸೆಂ.ಮೀ |
| | | ಅಗಲ - ೭೯ ಸೆಂ.ಮೀ. |
| ಸ್ವರೂಪ | : | ದುಂಡು ಶಿಲ್ಪ |
| ಸ್ಥಿತಿ | : | ಸುಸ್ಥಿತಿ |

**ಲಿಂಗದ ವಿವರಣೆ :**

ಈ ಅಮೃತ ಲಿಂಗೇಶ್ವರ ದೇವಾಲಯವು ಹೇರೂರಿನ ಊರ ಹೊರಗೆ ಇರುತ್ತದೆ. ಇದು ಪೂರ್ವಾಭಿಮುಖವಾಗಿರುತ್ತದೆ. ಈ ದೇವಾಲಯ ಚಾಲುಕ್ಯರ ಕಾಲದ ದೇವಾಲಯವಾಗಿದ್ದು ಶಿಖರ, ಅಂತರಾಳ, ಮುಖಮಂಟಪ ಹೊಂದಿದೆ. ಇದರ ಗರ್ಭಗೃಹದಲ್ಲಿ ಎತ್ತರವಾದ ಚೌಕಾಕಾರ ಪೀಠದ ಮೇಲೆ ಶಿವಲಿಂಗವನ್ನು ಸ್ಥಾಪಿಸಲಾಗಿದೆ. ಈ ಲಿಂಗದ ಎದುರಿಗೆ ಜೋಡಿ ನಂದಿ ವಿಗ್ರಹಗಳು ಸುಂದರವಾಗಿವೆ.

**ಶಿಲ್ಪದ ವೈಶಿಷ್ಟ್ಯ :**

'ಹೇರೂರು ಗ್ರಾಮವು ಐತಿಹಾಸಿಕ ಸ್ಥಳವಾಗಿದೆ ಎಂಬುದಕ್ಕೆ ಅಲ್ಲಿಯ ವಾಸ್ತುಶಿಲ್ಪಗಳು ಸಾಕ್ಷಿಯಾಗಿವೆ. ಇಲ್ಲಿಯ ಚಾಲುಕ್ಯ ಕಾಲದ ಎರಡು ದ್ವಾರಪಾಲಕರ ವಿಗ್ರಹ ಹಾಗೂ ಸೋಮೇಶ್ವರ ಮೂರ್ತಿ, ಗೋಗ್ರಹಣ ವೀರಗಲ್ಲು ಹಾಗೂ ಆ ಮೂರ್ತಿಗಳ ಮೇಲೆ ಇರುವ ಶಾಸನ ಇವೆಲ್ಲವುಗಳಿಂದ ಹೇರೂರಿನ ಇತಿಹಾಸವನ್ನು ತಿಳಿದುಕೊಳ್ಳಲು ಈ ಶಿಲ್ಪಗಳ ವೈಶಿಷ್ಟ್ಯ ಅಪಾರವಾಗಿದೆ.

| | | |
|---|---|---|
| **ದೇವಾಲಯ** | **:** | **ಸೋಮೇಶ್ವರ ಮೂರ್ತಿ** |
| ಮೂರ್ತಿ | : | ಸೋಮೇಶ್ವರ |
| ದಿಕ್ಕು | : | ಪಶ್ಚಿಮ ದಿಕ್ಕು |

ಕಾಲ : ೧೩ನೇ ಶತಮಾನ
ಶಿಲೆ : ಬಳಪದ ಶಿಲೆ
ಸ್ಥಳ : ದೇವಾಲಯದ ಆವರಣ
ಅಳತೆ : ಎತ್ತರ - ೧೧೭ ಸೆಂ. ಮೀ
ಅಗಲ - ೭೦ ಸೆಂ.ಮೀ.
ಸ್ವರೂಪ : ಉಬ್ಬು ಶಿಲ್ಪ
ಶೈಲಿ : ಚಾಲುಕ್ಯ ಶೈಲಿ
ಸ್ಥಿತಿ : ಸುಸ್ಥಿತಿ

**ಮೂರ್ತಿ ಸೋಮೇಶ್ವರ ಮೂರ್ತಿ :**

ಕಿರೀಟಧಾರಿ ವೀರದಂಪತಿ ಕದುರೆಯೇರಿ ಕುಳಿತಿದ್ದಾರೆ. ಈ ಎರಡು ವಿಗ್ರಹಗಳು ದುಂಡು ಶಿಲ್ಪಗಳಾಗಿವೆ. ಅಂದರೆ ಹಿಂದೆ ಮುಂದೆ ಪೂರ್ತಿ ಕಂಡರಿಸಿ ರಚಿಸಲಾಗಿದೆ. ಕೆಳಪಟ್ಟಿಕೆಯಲ್ಲಿ ಹಂದಿ (ವರಾಹ) ಶಿಲ್ಪವನ್ನು ದೊಡ್ಡದಾಗಿ ಕೆತ್ತಲಾಗಿದೆ. ಹಿಂದೆಡೆ ಒಬ್ಬ ಕಟಾರಿ ಹಿಡಿದು ನಿಂತಿದ್ದಾರೆ. ಅವನ ಹಿಂದೆ ಸ್ತ್ರಿಯೋರ್ವಳು ಬಿಲ್ಲುಬಾಣ ಹಿಡಿದು ವೀರಭಂಗಿಯಲ್ಲಿ ನಿಂತಿದ್ದಾಳೆ. ಹಂದಿಯ ಎದುರುಗಡೆ ಮತ್ತೊಬ್ಬ ವೀರಯೋಧ ಬಿಲ್ಲುಬಾಣ ಹಿಡಿದು ಕೈಮುಗಿದು ನಿಂತಿದ್ದು ಸೈನ್ಯವಾಗಿ ಕಂಡುಬರುತ್ತದೆ. ಇದರ ಮುಂದೆ ಗಿಡಗಳಂತೆ ಮೂರು ಪಕಳಿ ಹೂಗಳು ಕಂಡು ಬರುತ್ತವೆ. ಈ ಎಲ್ಲವನ್ನು ಉಬ್ಬುಶಿಲ್ಪ ಕೆತ್ತನೆಯ ತಂತ್ರದಲ್ಲಿ ಕೆತ್ತಲಾಗಿದೆ. ಹೀಗೆ ದುಂಡುಶಿಲ್ಪ ಮತ್ತು ತೆಳುಮೆಟ್ಟಟ ಶಿಲ್ಪಗಳ ಮಧ್ಯದ ಪಟ್ಟಿಕೆಯಲ್ಲಿ ಆರು ಸಾಲುಗಳ ಶಾಸನವನ್ನು ತುಂಬ ಜಿನುಗಾಗಿ ವಕ್ರ ವಕ್ರವಾಗಿ ಬರೆಯಲಾಗಿದೆ. ಕೆಲಭಾಗ ತುಸು ತ್ರುಟಿತಗೊಂಡಿದೆ. ಈ ಶಾಸನವು ವೀರನ ಬಗೆಗೆ ವಿವರಣೆ ನೀಡುತ್ತಿದ್ದು, ಹದಿಮೂರನೇಯ ಶತಮಾನಕ್ಕೆ ಸೇರುತ್ತದೆ. ಈ ಶಿಲ್ಪವನ್ನು ಪೂಜಾಮೂರ್ತಿಯ ಹಾಗೆ ಪೀಠದ ಮೇಲೆ ಪ್ರಿಷ್ಠಾಪಿಸಲು ಕೊಲನ್ನು ಮಾಡಿದಂತೆ ಕಂಡುಬರುತ್ತದೆ. ಆಭರಣ, ಅಳಂಕರಣೆ, ಮೈಮಾಟ ಶೈಲಿಯು ಮನೋಹರವಾಗಿದೆ.

**ಗೋಗ್ರಹಣ ವೀರಗಲ್ಲಿನ ಶಾಸನ :**

ಮೂರ್ತಿ : ಗೋಗ್ರಹಣ ವೀರಗಲ್ಲು
ಕಾಲ : ೧೨ನೇ ಶತಮಾನ
ಶಿಲೆ : ಬಳಪದ ಶಿಲೆ
ಸ್ಥಳ : ದೇವಾಲಯದ ಆವರಣ
ಸ್ವರೂಪ : ಉಬ್ಬು ಶಿಲ್ಪ
ಶೈಲಿ : ಚಾಲುಕ್ಯ ಶೈಲಿ
ಸ್ಥಿತಿ : ದುಸ್ಥಿತಿ

ಈ ಆವರಣದಲ್ಲಿ ಗೋಗ್ರಹಣ ಸೂಚಿಸುವ ವೀರಗಲ್ಲು ಶಾಸನದ ಎರಡು ತುಂಡುಗಳು ದೊರಕಿದ್ದು ಅದರಲ್ಲಿರುವ ಶಾಸನ ತ್ರುಟಿತವಾಗಿದೆ. ಲಿಪಿ ಲಕ್ಷಣಗಳನ್ನು ಆಧರಿಸಿ ಮತ್ತು ಶಿಲ್ಪ ಶೈಲಿಯನ್ನು ಆಧರಿಸಿ ಇದನ್ನು ಸುಮಾರು ಹನ್ನೆರಡನೇಯ ಶತಮಾನಕ್ಕೆ ಸೇರಿಸಬಹುದಾಗಿದೆ. ಇದನ್ನು ಬಳಪದ ಕಲ್ಲಲ್ಲಿ ಮಾಡಿದ್ದು ಶಿಲೆಯು ಅಷ್ಟು ಗಟ್ಟಿಯಿಲ್ಲ.

# ೧೦- ಚಿನ್ನಾಪೂರ - ಪಾರ್ಶ್ವನಾಥ ವಿಗ್ರಹ

| | | |
|---|---|---|
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಸಂಘದ ಕೋಠಡಿಯಲ್ಲಿ |
| ಅಳತೆ | : | ಎತ್ತರ - ೧೧೦ ಸೆಂ.ಮೀ |
| | | ಅಗಲ - ೫೦ ಸೆಂ.ಮೀ |
| ಸ್ವರೂಪ | : | ಸಮ ಉಬ್ಬುಶಿಲ್ಪ |
| ಸ್ಥಿತಿ | : | ಸುಸ್ಥಿತಿ |

ಇದೊಂದು ಅತಿ ಸುಂದರವಾದ ಶಿಲಾ ಪುತ್ಥಳಿಯಾಗಿದ್ದು, ಇದನ್ನು ಪಾರ್ಶ್ವನಾಥ ತೀರ್ಥಂಕರನೆಂದು ಗುರುತಿಸಲಾಗಿದೆ. ಏಳು ಹೆಡೆ ಸರ್ಪ, ಮುಕ್ಕೊಡೆ, ಧರಣೇಂದ್ರಯಕ್ಷ, ಮತ್ತು ಪದ್ಮಾವತಿ ಯಕ್ಷರು ಕೆಳಭಾಗದಲ್ಲಿದ್ದಾರೆ. ಕೋನಾಕೃತಿಯ ಪ್ರಭಾವಳಿಯ ಮೇಲೆ ಅಚೀಚೆ ಚಾಮರಗಳನ್ನಷ್ಟೇ ಕೆತ್ತಲಾಗಿದೆ.

ಪಾದ ಪೀಠವು ಪಂಚರಥ ಮಾದರಿಯಲ್ಲಿದ್ದು ಅದರ ಮೇಲೆ ಏಳು ಸಾಲುಗಳ ಶಾಸನವಿದೆ. ಇದನ್ನು ಡಾ|| ಹಂಪ ನಾಗರಾಜಯ್ಯನವರು "ಚಂದ್ರಕೋಡೆ" ಎಂಬ ಸಂಶೋಧನೆ ಕೃತಿಯಲ್ಲಿ ಆಗಲೇ ಪ್ರಕಟಿಸಿದ್ದಾರೆ.

# ೧೧- ತಾರಿವಾಳ

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ಕರಡಿ-ಇಲಕಲ್ |
| ತಾಲೂಕು | : | ಹುನಗುಂದ | ಜನಸಂಖ್ಯೆ | : | ೯,೦೦೦ |
| ಗ್ರಾಮ | : | ತಾರಿವಾಳ | ಹೋಬಳಿ | : | ಕರಡಿ |

**ಸ್ಥಳ ಪರಿಚಯ :**

ಹುನುಗುಂದ ಪೂರ್ವಕ್ಕೆ ೨೫ ಕಿ.ಮೀ ದೂರದಲ್ಲಿರುವ ತಾರಿವಾಳ ಐತಿಹಾಸಿಕ ಪ್ರಸಿದ್ಧ ಗ್ರಾಮವಾಗಿದೆ. ಇಲ್ಲಿ ಕ್ರಿ.ಶ. ೧೧ನೇ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ಇರಿವೆಬೇಡಂಗನ ಶಾಸನ ಲಭ್ಯವಿದ್ದು ಇದು ತ್ರುಟಿತಗೊಂಡಿದೆ. ಹನುಮಂತ ದೇವಸ್ಥಾನ, ಬಸವೇಶ್ವರ ದೇವಸ್ಥಾನ, ವೀರಗಲ್ಲುಗಳು ಹಾಗೂ ಶಾಸನವಿದೆ. ಗಜಲಕ್ಷ್ಮೀ ಶಿಲ್ಪ, ಈಶ್ವರಲಿಂಗ, ಆಂಜನೇಯ ಮೂರ್ತಿ ಪ್ರಸಿದ್ಧ ಪಡೆದಿವೆ.

**ಸ್ಥಳ ಐತಿಹ್ಯ :**

ತಾರಿವಾಳದ ಸುತ್ತಲೂ ಒಂದು ಕೋಟೆ ಗೋಡೆ ಇದ್ದು ಐತಿಹಾಸಿಕ ಭಾವಿವಿದೆ ಊರಿಗೆ ಮೊದಲು ತಾಯಿವಾಳ ಎಂದು ಕರೆಯುತ್ತಿದ್ದರು, ನಂತರ ತಾರಿವಾಳ ಎಂದು ಪ್ರಸಿದ್ಧ ಪಡೆಯಿತು. ಇಲ್ಲಿ ಕಲ್ಯಾಣಿ ಚಾಲುಕ್ಯರ ಇರಿವೆಬೇಡಂಗನ ಶಾಸನದಲ್ಲಿ ಈ ಗ್ರಾಮದ ಉಲ್ಲೇಖವಿದೆ.

**ವಾಸ್ತು ಕಲೆ :**

ತಾರಿವಾಳ ಗ್ರಾಮದಲ್ಲಿ ಹನಮಂತ ದೇವಸ್ಥಾನ ಈ ದೇವಾಲಯದ ಮುಂದೆ ಗಜಲಕ್ಷ್ಮೀ ಶಿಲ್ಪವಿದೆ. ಬಸವೇಶ್ವರ ದೇವಸ್ಥಾನ ಇದು ಶಿಖರರಹಿತ ದೇವಾಲಯ, ಗರ್ಭಗೃಹ, ಹಜಾರವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ ಗರ್ಭಗೃಹದ ಎಡಭಾಗದಲ್ಲಿ ಗೋಡೆಯಲ್ಲಿ ವೀರಗಲ್ಲು, ದೇವಾಲಯದ ಮುಂಭಾಗದಲ್ಲಿ ಕಲ್ಯಾಣಿ ಚಾಲುಕ್ಯರ ಶಾಸನ, ವೀರಗಲ್ಲು, ಇರುತ್ತವೆ. ಇದೊಂದು ಐತಿಹಾಸಿಕ ಸ್ಮಾರಕಗಳನ್ನು ಹೊಂದಿದ ಗ್ರಾಮವಾಗಿದೆ. ಇವೆಲ್ಲವು ಹಸಿರು ಮಿಶ್ರಿತ ಶಿಲೆಯನ್ನು ಬಳಸಿ ದೇವಾಲಯ ಹಾಗೂ ಸ್ಮಾರಕಗಳನ್ನು ರಚಿಸಿದ್ದಾರೆ.

| | | |
|---|---|---|
| ದೇವಾಲಯ | : | ಹನಮಂತ ದೇವಾಲಯ |
| ಮೂರ್ತಿ | : | ಹನಮಂತ |
| ದಿಕ್ಕು | : | ದಕ್ಷಿಣಾಭಿಮುಖ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಶೈಲಿ | : | ಚಾಲುಕ್ಯರ ಶೈಲಿ |
| ಅಳತೆ | : | ಎತ್ತರ - ೬೦ ಸೆಂ.ಮೀ<br>ಅಗಲ ೪೦ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯ :**

ಈ ದೇವಸ್ಥಾನ ಗ್ರಾಮದ ಹೊರಭಾಗದಲ್ಲಿದ್ದು, ದಕ್ಷಿಣಾಭಿಮುಖವಾಗಿದೆ. ಈ ಮೂರ್ತಿಯ ಸ್ವರೂಪ ಉಬ್ಬು ಶಿಲ್ಪವಾಗಿದ್ದು ದಕ್ಷಿಣಾಭಿಮುಖವಾಗಿ ಬಲಗೈಯನ್ನು ಅಭಯಹಸ್ತ ಮಾಡಿ ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡು ಊರುದ್ವೃತ್ತ ಭಂಗಿಯಲ್ಲಿದ್ದು ಕಂಠಹಾರ, ಕರ್ಣಕುಂಡಲ, ಕಿರೀಟಮುಕುಟ, ಕೈಗಡಗ, ಕಾಲ್ಗಡ, ಕಟಿಪಟ್ಟ ಧರಿಸಿದ್ದಾನೆ.

**ಗಜಗೌರಿಶಿಲ್ಪ :**

ಹನಮಂತ ದೇವಸ್ಥಾನದ ಗರಡು ಸ್ಥಂಭದ ಹತ್ತಿರವಿರುವ ಗಜಗೌರಿಶಿಲ್ಪ ಬೃಹೃತ ಕಲ್ಲನ್ನು ಬಳಸಿ ರಚಿಸಿದ್ದಾರೆ. ಈ ಮೂರ್ತಿಯು ಗ್ರಾಮದ ಆರಾಧ್ಯ ದೇತೆಯಾಗಿದೆ. ಹಸಿರುಗಲ್ಲನ್ನು ಬಳಸಿದ್ದಾರೆ. ಗಜಲಕ್ಷ್ಮೀ, ಸ್ಥಾನಿಕಭಂಗಿಯಲ್ಲಿದ್ದು ಎರಡು ಗಜಗಳು ಸೊಂಡಿನಲ್ಲಿ ಲಕ್ಷ್ಮೀಯ ಮೇಲೆ ನೆರಳ ಮಾಡಿವೆ ಒಂದು ಬಲಗೈಯ ಪತಾಕಹಸ್ತವಾಗಿದೆ ಎಡಗೈ ಆಯುಧವಿದೆ, ಕಿರೀಟಮುಕುಟ, ಧರಿಸಿದ್ದು. ಕಂಠಹಾರ, ತೋಳಬಂದಿಯನ್ನು ಧರಿಸಿದ್ದಾಳೆ. ಈ ಶಿಲ್ಪವು ಚಾಲುಕ್ಯರ ಕಾಲದ್ದಾಗಿದೆ.

| | | |
|---|---|---|
| ದೇವಾಲಯ | : | ಬಸವೇಶ್ವರ ದೇವಸ್ಥಾನ |
| ಶಿಲ್ಪ | : | ಈಶ್ವರ ಲಿಂಗ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ | : | ಎತ್ತರ ೪೦ ಸೆಂ.ಮೀ |
| | | ಅಗಲ ೪೫ ಸೆಂ.ಮೀ ಲಿಂಗದ ಸುತ್ತಳತೆ |
| ಸ್ಥಿತಿ | : | ಸುಸ್ಥಿತಿ |

**ಲಿಂಗದ ವೈಶಿಷ್ಟ್ಯ :**

ಗರ್ಭಗೃಹದಲ್ಲಿರುವ ಈಶ್ವರಲಿಂಘವು ಕರಿಯ ಶಿಲೆಯನ್ನು ಬಳಸಿದ್ದಾರೆ. ಎತ್ತರವಾದ ಪೀಠದ ಮೇಲೆ ಈ ಲಿಂಗವನ್ನು ಪ್ರತಿಸ್ಥಾಪಿಸಲಾಗಿದೆ. ಈ ಲಿಂಗದ ಎದುರಿಗೆ ನಂದಿ ವಿಗ್ರಹವಿದೆ. ಈ ದೇವಾಲಯ ದುಸ್ಥಿತಿಯಲ್ಲಿದೆ.

**ವೀರಗಲ್ಲುಗಳು :**

ಭಸವೇಶ್ವರ ದೇವಸ್ಥಾನದ ಗರ್ಭಗಹದ ಬಲಗಡೆ ಹಾಗೂ ದೇವಾಲಯದ ಮುಂದಿನ ಭಾಗದಲ್ಲಿ ಎರಡು ವೀರಗಲ್ಲುಗಳು ದೊರತಿವೆ ಹಾಗೂ ಅದರ ಜೊತೆಗೆ ಶಾಸನವು ಲಭ್ಯವಿದೆ. ಈ ವೀರಗಲ್ಲುಗಳು, ಹಸಿರುಶಿಲೆಯನ್ನು ಬಳಸಲಾಗಿದೆ. ವೀರಪರಂಪರೆಯು ಈ ಗ್ರಾಮದ ಸಂಕೇತದಂತಿರುವ ಈ ವೀರಗಲ್ಲುಗಳು ಒಂದೇ ತರನಾದ ಯುದ್ಧದ ಸನ್ನಿವೇಶಗಳನ್ನು ಹೊಂದಿದ್ದು ಮೂರು ಪಟ್ಟಿಕೆಗಳನ್ನು ಒಳಗೊಂಡಿದೆ.

ವೀರಗಲ್ಲುಗಳ ಮೂರಪಟ್ಟಿಯ ದೃಶ್ಯ ವಿವರಣೆ :-

**ಮೊದಲನೆ ಪಟ್ಟಿ :** ಕೆಳಗಿನ ಪಟ್ಟಿಯ ವೀರ ಮತ್ತು ವಿರೋಧಿಗಳು ಯುದ್ಧಲದಲಿ ಹೋರಾಡುತ್ತರುವ ದೃಶ್ಯ ಅವರ ಕೈಯಲ್ಲಿಗಜೆ, ಬಿಲ್ಲುಬಾಣ, ಗುರಾಣಿ, ಖಡ್ಗ ಹಿಡಿದು ಯುದ್ಧಮಾಡುವ ದೃಶ್ಯ ಹಾಗೂ ಒಂದು ಕೈಯನ್ನು ಮೇಲೆತ್ತಿರುವುದು ಹಿಂದೆ ವೀರರಗುಂಪು ಹಿಂಬಾಲಿಸಿದಂತಿದೆ.

**ಎರಡನೆ ಪಟ್ಟಿ** - ಮಧ್ಯ ಪಟ್ಟಿಕೆಯಲ್ಲಿ ಯುದ್ಧದಲ್ಲಿ ಸಾವನೊಪ್ಪಿದ ವೀರನನ್ನು ಅಪ್ಸರೆಯರು ವಿಮಾನದಲ್ಲಿತೆಗೆದುಕೊಂಡು ಹೋಗುವದು ಎಂಟು ಅಪ್ಸರೆಯರು ಎಡಭಾಗದಲ್ಲಿನಾಲ್ಕು ಬಲಭಾಗದಲ್ಲಿ ನಾಲ್ಕು ಅಪ್ಸರೆಯರ ದೃಶ್ಯವಿದೆ.

**ಮೂರನೆ ಪಟ್ಟಿ :** ಈ ಮೇಲಿನ ಪಟ್ಟಿಯಲ್ಲಿ ಒಬ್ಬ ಸ್ತ್ರೀ ಲಿಂಗಪೂಜೆ ಮಾಡುತ್ತಿರುವ ದೃಶ್ಯ ಪಕ್ಕದಲ್ಲಿಕೈಮುಗಿದು ಕುಳಿತಿರುವ ಚಿತ್ರವಿದೆ. ಈಶ್ವರಲಿಂಗದ ಮೇಲ್ಭಾಗದಲ್ಲಿ ಚಂದ್ರ ಹಾಗೂ ಸೂರ್ಯ ಚಿತ್ರಗಳಿವೆ. ಅಂದರೆ ವೀರನು ಈ ಯುದ್ಧದಲ್ಲಿ ಹೋರಾಡಿ ಸಾವನೊಪ್ಪಿದ ದೃಶ್ಯವೆಂದು ಕಂಡು ಬಂದಿದ್ದು ಆತನಿಗೆ ಮೊಕ್ರದೊರೆಯಲ್ಲಿ ಎಂಬ ನಂಬಿಕೆ ಈ ದೃಶ್ಯದಿಂದ ಗೋಚರವಾಗುತ್ತದೆ.

# ೧೨-ತೂರಮರಿ

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ಬೂದಿಹಾಳ-ಕರಡಿ |
| ತಾಲೂಕು | : | ಹುನಗುಂದ | ಜನಸಂಖ್ಯೆ | : | ೫,೦೦೦ |
| ಗ್ರಾಮ | : | ತೂರಮರಿ | ಹೋಬಳಿ | : | ಕರಡಿ |

**ಸ್ಥಳ ಪರಿಚಯ :**

ಇದು ಹುನುಗುಂದ ಈಶಾನ್ಯಕ್ಕೆ ೩೦ ಕಿ.ಮೀ ದೂರದಲ್ಲಿದೆ. ಈ ಗ್ರಾಮ ಅತ್ಯಂತ ಪ್ರಾಚೀನವೆಂದು ತಿಳಿಯಲು ನಮಗೆ ೧೨೧೩ರಲ್ಲಿ ಸಿಕ್ಕಿರುವ ಕಲ್ಯಾಣಿ ಚಾಲುಕ್ಯರ ಶಾಸನ ಆಧಾರವಾಗಿದೆ. ಇಲ್ಲಿ ದೇಸಾಯಿಯವರ ಆಡಳಿವಿದ್ದು ಈ ಶಾಸನ ೫ ಸಾಲುಗಳ ಮಾತ್ರ ಅಸ್ಪಷ್ಟವಾಗಿವೆ. ತ್ರುಟಿತಗೊಂದ ಶಾಸನವಾಗಿದೆ. ಇಲ್ಲಿ ಆಂಜನೇಯ ದೇವಸ್ಥಾನ, ಮಹೇಂದ್ರಸ್ವಾಮಿಮಠ, ಮಸಿದಿ, ದ್ಯಾಮವ್ವ ದುರ್ಗಾದೇವಿ ಪ್ರಾಚೀನವಾದ ಶಿಲಾಸ್ತಂಭಗಳನ್ನು ಗರ್ಭಗೃಹವನ್ನು ಹೊಂದಿದೆ. ಈ ದೇವಾಲಯದ ಪರಿಸರದಲ್ಲಿ ಶಕ್ತಿದೇವತೆ, ಗಣೇಶ, ಗಜಲಕ್ಷ್ಮೀಶಿಲ್ಪ, ಆಂಜನೇಯ ಮೂರ್ತಿ ಕಂಡು ಬರುತ್ತವೆ. ಇವು ಚಾಲುಕ್ಯರ ಸಮಕಾಲಿನ ಅವಧಿಯಲ್ಲಿ ರಚಿತಗೊಂಡಿವೆ, ಈ ಗ್ರಾಮದ ಸುತ್ತಲೂ ಕೋಟೆ ಗೋಡೆಯಿದೆ. ಇಲ್ಲಿ ಹರಿಯುವ ಹೀರೆಹಳ್ಳ ಪ್ರಸಿದ್ಧಪಡೆದಿದೆ.

**ಸ್ಥಳ ಐತಿಹ್ಯ :**

ಗ್ರಾಮದ ಬಲಭಾಗದಲ್ಲಿ ಹೀರೆಹಳ್ಳ ನಿರಂತರ ಪ್ರವಾಹವೋಪಾಯದಿಯಲ್ಲಿ ಬರುತ್ತಿತ್ತು. ಗ್ರಾಮದ ಬಹುಭಾಗ ಮುಳುಗುತ್ತಿತ್ತು. ಆಗ ಒಂದು ಮರಿಯನ್ನು ಕೋಟೆಯ ಮೇಲಿಂದ ಹಳ್ಳಕ್ಕೆ ತೂರಲಾಯಿತು. ಅಂದಿನಿಂದ ಪ್ರವಾಹ ಕಡಿಮೆಯಾಯಿತು. ಆಗ ಅದಕ್ಕೆ ತೂರಮರಿ ಎಂದು ಹೆಸರು ಬಂದಿತು ಎಂಬುದು ಗ್ರಾಮದವರ ನಂಬಿಕೆಯಾಗಿದೆ.

| | | |
|---|---|---|
| ದೇವಾಲಯ | : | ಆಂಜನೇಯ |
| ಮೂರ್ತಿ | : | ಆಂಜನೇಯ |
| ಭಂಗಿ | : | ನಿಂತಿರುವುದು |
| ದಿಕ್ಕು | : | ದಕ್ಷಿಣಾಭಿಮುಖ |
| ಕಾಲ | : | ೧೨ನೇ ಶತಮಾನ |
| ಶಿಲೆ | : | ಕಪ್ಪುಶಿಲೆ |
| ಅಳತೆ | : | ಎತ್ತರ ೭೫ ಸೆಂ.ಮೀ<br>ಅಗಲ ೪೫ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಶಾಕ್ತದೇವತೆ ವೈಶಿಷ್ಟ್ಯ :**

ವೀರಾಂಜನೇಯ ದೇವಾಲಯದ ಆವರಣದಲ್ಲಿ ಗಣೇಶ ಮೂರ್ತಿ, ಶಾಕ್ತದೇವತೆಗಳು ಇವೆ. ಈ ಮೂರ್ತಿಯು ಕರಿಯಶಿಲೆಯಿಂದ ನಿರ್ಮಿತವಾಗಿದೆ. ೪೫ ಸೆಂ.ಮೀ ಎತ್ತರ ೪೦ ಸೆಂ. ಮೀ ಅಲಗವಾಗಿದೆ. ಕಿರೀಟಮುಕುಟ, ಧರಿಸಿರುವ ಇದು ಸ್ಥಾನಿಕಭಂಗಿಯಲ್ಲಿದೆ. ಬಲಗೈಯಲ್ಲಿ ತ್ರಿಶೂಲ, ಎಡಗೈಯಲ್ಲಿ ಪುಷ್ಪಪುಟ, ಕಂಠಹಾರ, ತೋಳ್ಬಂದಿ, ಕಟಿಸೂತ್ರ, ಸ್ತನಹಾರ, ಕಾಲ್ಗಡಗ,ಆಭರಣಗಳು ಇವೆ ಇದೊಂದು ಶಕ್ತಿದೇವತೆಯಿಂದ ಗ್ರಾಮದ ನಂಬಿಕೆಯಾಗಿದೆ.

# ೧೩-ಹೀರೆಶಿಂಗನಗುತ್ತಿ

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ಹುನಗುಂದ-ಲಿಂಗಸೂರ |
| ತಾಲೂಕು | : | ಹುನಗುಂದ | ಜನಸಂಖ್ಯೆ | : | ೧೦,೦೦೦ |
| ಗ್ರಾಮ | : | ಹೀರೆಶಿಂಗನಗುತ್ತಿ | ಹೋಬಳಿ | : | ಇಲಕಲ್ |

**ಸ್ಥಳ ಪರಿಚಯ :**

ಇದು ಹುನುಗುಂದ ಪ್ರದೇಶದ ಪ್ರಮುಖ ಗ್ರಾಮಗಳಲ್ಲಿ ಒಂದಾದ ಹೀರೆಶಿಂಗನಗುತ್ತಿ ತಾಲೂಕು ಕೇಂದ್ರದಿಂದ ೩೦ ಕಿ.ಮೀ ದೂರದಲ್ಲಿದೆ. ಇದು ಐತಿಹಾಸಿಕ ಸ್ಥಳವಾಗಿತ್ತು ಎಂಬುದಕ್ಕೆ ಅಲ್ಲಿಯ ಶಾಸನಗಳು, ಸ್ಮಾರಕಗಳು, ವೀರಗಲ್ಲು, ದೇವಾಲಯಗಳು ಸಾಕ್ಷಿಯಾಗಿವೆ. ಈಶ್ವರಗುಡಿಯ ಹತ್ತಿರವಿರುವ ಕಲ್ಯಾಣಿ ಚಾಲುಕ್ಯರ ೬ನೇ ವಿಕ್ರಮಾದಿತ್ಯಾನ ಕ್ರಿ.ಶ.೧೧ನೇ ಶತಮಾನದ ಉಲ್ಲೇಖವಿರುವ ಈ ಶಾಸನದಿಂದ ಇದೊಂದು ಐತಿಹಾಸಿಕ ಸ್ಥಳವಾಗಿತ್ತು ಎಂಬುದು ಸ್ಪಷ್ಟವಾಗಿದೆ.

**ಸ್ಥಳ ಐತಿಹ್ಯ :**

ಶಿಂಗನಗುತ್ತಿ ಎಂಬುದು ಮೂಲ ಹೆಸರಾಗಿದ್ದು ಇಲ್ಲಿ ಚಿಕ್ಕದಾಗಿ ಹಳ್ಳಕ್ಕೆ ಬ್ಯಾರೇಜ ನಿರ್ಮಾಣ ಮಾಡಿದ್ದರಿಂದ ಈ ಶಿಂಗನಗುತ್ತಿ ಗುಡ್ಡದ ಎಡ ಮತ್ತು ಬಲಭಾಗದಲ್ಲಿ ವಿಂಗಡಣೆಯಾಯಿತು. ಅದಕ್ಕಾಗಿ ಹೀರೆಶಿಂಗನಗುತ್ತಿ ಎಂದು ಕರೆದರು. ಇನ್ನೊಂದು ಸ್ಥಳಕ್ಕೆ ಚಿಕ್ಕ ಶಿಂಗನಗುತ್ತಿ.

**ವಾಸ್ತು ಕಲೆ :**

ಚಾಲುಕ್ಯರ ಅವಧಿಯಲ್ಲಿ ನಿರ್ಮಿತವಾದ ಕೆಂಪು ಮಿಶ್ರಿತ ಉಸುಕುಕಲ್ಲಿನ ದೇವಾಲಯಗಳು ಗ್ರಾಮದ ಗುಡ್ಡದ ಮೇಲೆ ನಿರ್ಮಿಸಿದ್ದಾರೆ. ಮಾರುತಿ ದೇವಾಲಯ, ಈಶ್ವರ ದೇವಾಲಯ, ಗೌರಮ್ಮದೇವಾಲಯ, ಮಲ್ಲಿಕಾರ್ಜುನ ದೇವಾಲಯ, ಪ್ರಮುಖವಾಗಿವೆ. ಇಲ್ಲಿ ವೀರಗಲ್ಲು ನಾಗಕನ್ಯೆಯಶಿಲ್ಪ, ಗಜಗೌರಿ, ಸಪ್ತಮಾತೃಕೆಯರು, ಶಿವಲಿಂಗ, ವಿಷ್ಣುವಿನಶಿಲ್ಪ, ಆಕರ್ಷಣೆಯಾಗಿವೆ.

| | | |
|---|---|---|
| ದೇವಾಲಯ | : | ಮಾರುತಿ ದೇವಾಲಯ |
| ಶಿಲ್ಪ | : | ವೀರಗಲ್ಲು |
| ದಿಕ್ಕು | : | ದಕ್ಷಿಣಾಭಿಮುಖ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಹಸಿರು ಬಳಪದ ಕಲ್ಲು |
| ಅಳತೆ | : | ಎತ್ತರ ೩೦ ಸೆಂ.ಮೀ<br>ಅಗಲ - ೨೦ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ವೀರಗಲ್ಲಿನ ದೃಶ್ಯ ವಿವರಣೆ :**

ಮಾರುತಿ ದೇವಾಲಯದ ಗರಡುಸ್ತಂಭದ ಎಡಭಾಗದಲ್ಲಿರುವ ಈ ವೀರಗಲ್ಲು ಈ ಊರಿನ ಅಗಸಿಬಾಗಿಲಿನ ಹತ್ತಿರವಿದೆ. ಇದೊಂದು ವೈಶಿಷ್ಟ್ಯ ಪೂರ್ಣವಾದ ವೀರಗಲ್ಲಾಗಿದೆ. ಬಳಿಕಲ್ಲಿನಲ್ಲಿ ವೀರಸಾಧನೆ ದೃಶ್ಯವನ್ನು ರಚಿಸಿದ್ದಾರೆ. ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ಇದು ರಚಿತವಾಗಿದೆ. ಈ ವೀರಗಲ್ಲು ಎರಡು ಪಟ್ಟಿಯನ್ನು ಹೊಂದಿದೆ.

**ಮೊದಲನೆ ಪಟ್ಟಿ :** ಕೆಳಗಿನ ಪಟ್ಟಿಯಲ್ಲಿ ವೀರಯೋಧ, ಕೈಯಲ್ಲಿ ಬಿಲ್ಲುಬಾಣ ಹಿಡಿದು ಯುದ್ಧಮಾಡುವ ಸನ್ನಿವೇಶ ಮೂರು ಜನ ವಿರೋಧಿಗಳು ಯುದ್ಧದಲ್ಲಿ ಸೋತು ಪಲಾಯನ ಮಾಡುವ ದೃಶ್ಯವಿದೆ.

**ಎರಡನೆಯ ಪಟ್ಟಿ :** ಮೇಲಿನ ಪಟ್ಟಿಯಲ್ಲಿ ಒಬ್ಬ ಸ್ತ್ರೀ ಲಿಂಗವನ್ನು ಪೂಜೆ ಮಾಡುತ್ತಿರುವ ದೃಶ್ಯ ಪಕ್ಕದಲ್ಲಿ ಕೈಮುಗಿದು ಕುಳಿತಿರುವ ಚಿತ್ರವಿದೆ.ಯುದ್ಧದಲ್ಲಿ ಸಾವನೊಪ್ಪಿ ಲಿಂಗೈಕ್ಯದ ದೃಶ್ಯವೆಂದು ತಿಳಿದು ಬರುತ್ತದೆ.

| | | |
|---|---|---|
| ದೇವಾಲಯ | : | ಈಶ್ವರ ದೇವಾಲಯ |
| ಶಿಲ್ಪ | : | ಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಕೆಂಪು ಮಿಶ್ರಿತ ಬಳಪದ ಕಲ್ಲು |
| ಸ್ಥಳ | : | ಗರ್ಭಗೃಹ |
| ಅಳತೆ | : | ೪೦ ಸೆಂ.ಮೀ ಲಿಂಗದ ಸುತ್ತಳತೆ ೬೫ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಲಿಂಗದ ವೈಶಿಷ್ಟ್ಯತೆ :**

ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾದ ಈ ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪ, ಶಿಖರವಿದೆ. ವೃತ್ತಾಕಾರದ ಸ್ತಂಭಗಳು ವಿಶೇಷವಾಗಿವೆ. ಗರ್ಭಗೃಹದಲ್ಲಿ ಶಿವಲಿಂಗ ಕರಿಯಕಲ್ಲಿನಿಂದ ರಚಿಸಲಾಗಿದೆ. ಎದುರಿಗೆ ನಂದಿವಿಗ್ರಹವಿದೆ. ಯೋನಿ ಆಕಾರದ ಪೀಠದ ಒಳಗೆ ನಂದಿ ವಿಗ್ರಹವಿದೆ. ಎರಡು ಕಾಲುಗಳನ್ನು ಒಳಗೆ ತೆಗೆದುಕೊಂಡು ಕುಳಿತುಕೊಂಡಿದೆ. ಕೊರಳಲ್ಲಿ ಗೆಜ್ಜೆಸರ, ಕೊಂಬಣಸು, ಮುಂಗಾಲಲ್ಲಿ ಕಾಲಗಡಗಳು ಇವೆ ಎತ್ತರ ೪೦ ಸೆಂ.ಮೀ ಇದ್ದು ಇದೊಂದು ವೈಶಿಷ್ಟ್ಯ ಪೂರ್ಣವಾಗಿದೆ.

| | | |
|---|---|---|
| ದೇವಾಲಯ | : | ಗೌರಮ್ಮ |
| ಮೂರ್ತಿ | : | ಗೌರಮ್ಮ |
| ದಿಕ್ಕು | : | ಪೂರ್ವಾಭಿಮುಖ |
| ಭಂಗಿ | : | ಸ್ಥಾನಿಕ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ | : | ಎತ್ತರ - ೪೦ ಸೆಂ.ಮೀ |
| | | ಅಗಲ - ೩೫ ಸೆಂ.ಮೀ |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯತೆ :**

ಪೂರ್ವಾಭಿಮುಖವಾಗಿರುವ ಈ ಮೂರ್ತಿಯು ಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿದೆ. ಸಮನಖ ಸ್ಥಿತಿಯಲ್ಲಿರುವ ಮೂರ್ತಿಯು ಕರಂಡ ಮುಕುಟ, ಕಂಠಾಭರಣ, ಕಟಿಸೂತ್ರಗಳ ರಚಿಸಲಾಗಿದೆ. ಇದೊಂದು ವಿಶೇಷವಾದ ಶಿಲ್ಪವಾಗಿದೆ.

| | | |
|---|---|---|
| ದೇವಾಲಯ | : | ಮಲ್ಲಿಕಾರ್ಜುನ ದೇವಾಲಯ |
| ಶಿಲ್ಪ | : | ಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ | : | ಎತ್ತರ - ೩೫ ಸೆಂ.ಮೀ ೬೦ ಸೆ।ಮೀ. ಲಿಂಗದ ಸುತ್ತಳತೆ |
| ಸ್ಥಿತಿ | : | ಸುಸ್ಥಿತಿ |

**ಶಿಲ್ಪದ ವೈಶಿಷ್ಟ್ಯತೆ :**

ಪೂರ್ವಾಭಿಮುಖವಾಗಿರುವ ಈ ದೇವಾಲಯದ ಹೊರಭಿತ್ತಿಯು ವಿಶೇಷತೆಯಿಂದ ಕೂಡಿದೆ. ಕೆಂಪು ಮಿಶ್ರಿತ ಕಲ್ಲುಗಳಿಂದ ಈ ದೇಗುಲ ನಿರ್ಮಾಣವಾಗಿದೆ. ಗರ್ಭಗೃಹ, ಸಭಾಮಂಟಪವಿದ್ದು ಶಿಖರ ರಹಿತವಾಗಿದೆ. ಎತ್ತರವಾದ ಪೀಠದ ಮೇಲೆ ಕರಿಯಕಲ್ಲಿನಲ್ಲಿ ಶಿವಲಿಂಗವಿದ್ದು ಹೊಳಪಿನಿಂದ ಕೂಡಿದೆ. ಎದುರಿಗೆ ನಂದಿ ವಿಗ್ರಹವಿದೆ. ದೇವಾಲಯದ ಮುಂಭಾಗದಲ್ಲಿ ತ್ರುಟಿತಗೊಂಡ ಶಾಸನವಿದೆ.

**ಆವರಣದ ಶಿಲ್ಪಗಳು :**

ದೇವಾಲಯದ ಆವರಣದಲ್ಲಿ ವಿಶೇಷವಾದ ಶಿಲ್ಪಗಳು ಕಂಡು ಬಂದವು. ಸ್ಥಾನಿಕ ಭಂಗಿಯಲ್ಲಿರುವ ಸಪ್ತ ಮಾತೃಕೆ ಶಿಲ್ಪ, ಸ್ಥಾನಿಕಭಂಗಿಯಲ್ಲಿರುವ ಗಣಪ ವಿಗ್ರಹ, ನಾಗ - ನಾಗಿಣಿ ಶಿಲ್ಪಗಳು ವಿಶೇಷವಾಗಿವೆ.

# ೧೪ - ನಂದವಾಡಗಿ

| | | | |
|---|---|---|---|
| ಜಿಲ್ಲೆ | : ಬಾಗಲಕೋಟ | ಮಾರ್ಗ | : ಬಾಗಲಕೋಟ-ಹೈದ್ರಾಬಾದ್ |
| ತಾಲೂಕು | : ಹುನಗುಂದ | ಜನಸಂಖ್ಯೆ | : ೫೦೦೦ |
| ಗ್ರಾಮ | : ನಂದವಾಡಗಿ | ಹೋಬಳಿ | : ಇಲಕಲ್ |

**ಸ್ಥಳ ಪರಿಚಯ :**

ಹುನುಗುಂದ ಆಗ್ನೇಯಕ್ಕೆ ೨೫ ಕಿ.ಮೀ ದೂರದಲ್ಲಿದೆ. ನಿಜಾಮುರ ರಾಜ್ಯದ ಸೀಮೆಯ ಬಳಿಯಲ್ಲಿ ಈ ನಂದವಾಡಗಿ ಇರುತ್ತದೆ. ಈ ಊರಿಗೆ - ಒಂದುಕಿಲ್ಲೆ -ಒಂದು ಪೇಟೆ-ಎಂಬ ಎರಡು ಭಾಗಗಳಿರುತ್ತವೆ. ಇದು ಪೂರ್ವದಲ್ಲಿ ನಂದರಾಜನೆಂಬ ಅರಸನ ರಾಜಧಾನಿಯಾಗಿತ್ತೆಂದು ಹೇಳುತ್ತಾರೆ. ನಂದವಾಡಗಿಯ ಕೋಟೆಯ ಒಳಗೆ ಈಶ್ವರನ ಗುಡಿ ಇರುತ್ತದೆ. ಅದರ ಬಳಿಯಲ್ಲಿ ಬಿದ್ದಿರುವ ೯ ಪೂಟ ಉದ್ದವಾದ ವೀರಗಲ್ಲಿನಂಥ ಕಂಬದ ಮೇಲೆ ಕನ್ನಡ ಲಿಪಿಗಳಿರುತ್ತವೆ.

ಈ ಗ್ರಾಮದಲ್ಲಿ ಕ್ರಿ.ಶ. ೧೩ನೇ ಶತಮಾನದಲ್ಲಿ ಉರಿಲಿಂಗದೇವರ ಮತ್ತು ಉರಿಲಿಂಗಪೆದ್ದಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಬಂಡೆಗಳಿಂದ ಕೂಡಿದ ಒಂದು ಕೆರೆಯನ್ನು ಆಪುರದ ಅರಸುಹರಿಜನ ಗುರುಲಿಂಗಪೆದ್ದಿಗಳ ಸಹಾಯದಿಂದ ಕಟ್ಟಿಸಿದನೆಂಬ ಉಲ್ಲೇಖ. "ನಂದರಾಜನಂತಹ ರಾಜನಿಲ್ಲ ನಂದವಾಡಗಿಯಂತ ಪುರವಿಲ್ಲ"ಎಂಬ ನುಡಿ ಅನೂಚೀನವಾಗಿ ಪ್ರಸಿದ್ಧಿಯಾಗಿದೆಯೆಂದು ಕರ್ಣೋಪಕರಣವಾಗಿ ನಮಗಿದು ತಿಳಿದು ಬಂದಿದೆಯೆಂದು ಹಿರಿಯರು ಹೇಳುತ್ತಾರೆ.

ಈ ಗ್ರಾಮದಲ್ಲಿ ಪುರಾತನ ದೇವಾಲಯಗಳಾದ ಮೂಕದೇವರಗುಡಿ, ಸಂಗಮೇಶ್ವರ ದೇವಾಲಯ, ಮಲ್ಲಯ್ಯ ದೇವಾಲಯ, ಹನುಮಂತ ದೇವಾಲಯ ಇವುಗಳು ಪ್ರಮುಖವಾಗಿವೆ.

ಈ ಗ್ರಾಮದಲ್ಲಿ ಎರಡು ಶಿಲಾಶಾಸನಗಳಿವೆ. ಈ ಗ್ರಾಮ ಐತಿಹಾಸಿಕ ದೃಷ್ಟಿಯಿಂದ ಮಹತ್ವ ಪಡೆದಿದೆ. ನಂದವಾಡಗಿ ಪ್ರಾಚೀನ ಕಾಲದಿಂದ ಇಂದಿಗೂ ತನ್ನ ಮಹತ್ವವನ್ನು ಉಳಿಸಿಕೊಂಡು ಬಂದ ಪುರಾತನ ಗ್ರಾಮವಾಗಿದೆ.

**ಸ್ಥಳ ಐತಿಹ್ಯ :**

ಈ ಗ್ರಾಮವು ಇದೊಂದು ಪುರಾತನ ಗ್ರಾಮವಾಗಿದೆ. ಹಾಗೂ ಈ ಹಿಂದೆ ಇದೊಂದು ರಾಜಧಾನಿಯಾಗಿತ್ತು ಆದ್ದರಿಂದ ಇಲ್ಲಿ ನಂದರಾಜನೆಂಬ ರಾಜನು ಆಳುತ್ತಿದ್ದನು. ಅದಕ್ಕಾಗಿ ಇದು ನಂದವಾಡಗಿ ಎಂಬ ಹೆಸರು ಬಂದಿದೆಯೆಂದು ಈ ಊರಿನ ಜನರು ಹೇಳುತ್ತಾರೆ.

**ವಾಸ್ತು ಕಲೆ :**

ನಂದವಾಡಗಿ ಗ್ರಾಮದಲ್ಲಿ ಪ್ರಾಚೀನ ಅವಶೇಷಗಳು ಕೋಟೆಗೋಡೆಗಳು, ದೇವಾಲಯಗಳು ಶಾಸನಗಲ್ಲು ಇಲ್ಲಿ ದೊರೆಯುತ್ತವೆ.

ಮೂಕದೇವರ ದೇವಾಲಯ, ಸಂಗಮೇಶ್ವರ ದೇವಾಲಯ, ಮಲ್ಲಯ್ಯ ದೇವಾಲಯ, ಹನುಮಂತ ದೇವಾಲಯ ಇವು ಈ ಊರಿನ ಪ್ರಾಚೀನ ದೇವಾಲಯುಗಳಾಗಿವೆ. ಇವುಗಳು ಚಾಲುಕ್ಯ ಶೈಲಿಯನ್ನು ಹೊಂದಿರುತ್ತವೆ. ಮೂರ್ತಿಗಳನ್ನು ಕಪ್ಪು ಶಿಲೆಯಿಂದ ಕೆತ್ತಲಾಗಿದ್ದು ಉಬ್ಬು ಶಿಲ್ಪಗಳು ಕಂಡು ಬರುತ್ತವೆ.

| | | |
|---|---|---|
| ೧. **ದೇವಾಲಯ** | : | **ಸಂಗಮೇಶ್ವರ** |
| ಶಿಲ್ಪ | : | ಈಶ್ವರಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೧ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಶೈಲಿ | : | ಚಾಲುಕ್ಯ ಶೈಲಿ |
| ಅಳತೆ | : | ಎತ್ತರ - ೫೮ ಸೆಂ.ಮೀ |
| | | ಲಿಂಗ ಸುತ್ತಳತೆ - ೬೦ ಸೆಂ.ಮೀ. |
| | | ಪೀಠದ ಎತ್ತರ - ೩೪ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಲಿಂಗದ ವಿವರಣೆ :**

ನಂದವಾಡಗಿ ಕಿಲ್ಲೆಯಲ್ಲಿರುವ ಈ ದೇವಾಲಯ ಪ್ರಸಿದ್ಧವಾದುದಾಗಿದೆ. ಈಶ್ವರ ಲಿಂಗದ ಎದುರಿಗೆ ನಂದಿಯಿದ್ದು ಪಶ್ಚಿಮಾಭಿಮುಖವಾಗಿ ಈ ನಂದಿಯ ನಾಲ್ಕು ಕಾಲುಗಳನ್ನು ಮಡಚಿ ಈಶ್ವರಲಿಂಗದ ಎದುರಿಗೆ ಕುಳಿತಿರುವ ಈ ನಂದಿ ಸುಂದರವಾಗಿದೆ. ಈ ಶಿವಲಿಂಗವು ಚೌಕಾಕಾರದ ಯೋನಿಪೀಠದ ಮೇಲೆ ನಿರ್ಮಿತವಾಗಿದೆ. ಇದರ ಜಲಹರಿಯ ಉತ್ತರಕ್ಕೆ ಇರುವುದು. ಲಿಂಗವು ಕಪ್ಪು ಶಿಲೆಯಿಂದ ವೃತ್ತಾಕಾರವಾಗಿದೆ. ಈ ದೇವಾಲಯದಲ್ಲಿ ೩೨ ಕಂಭಗಳಿವೆ. ಇದು ಚಾಲುಕ್ಯ ಶೈಲಿಯನ್ನು ಹೊಂದಿರುವ ದೇವಾಲಯ, ಗರ್ಭಗುಡಿಯ ಎಡ ಮತ್ತು ಬಲ ಪಾರ್ಶ್ವದಲ್ಲಿ ಚಾಮರಾಧಾರಿಕೆಯರು ಮತ್ತು ನರ್ತಕಿಯರು ಮೂರ್ತಿಗಳ ಆಕರ್ಷಣೆಯವಾಗಿವೆ. ಈ ದೇವಾಲಯದ ಗೋಪುರದ ನೆರಳು ಪಶ್ಚಿಮ ದಿಕ್ಕಿಗೆ ಸೂರ್ಯ ಉದಯಕಾಲಕ್ಕೆ ಎಲ್ಲಿ ಬೀಳುತ್ತದೆಯೋ ಅಲ್ಲಿ ನಿಧಿ ಇದೆ ಎಂಬ ಈ ಊರಿನ ಜನರ ನಂಬಿಕೆ, ಈಗ ಗೋಪೂರ ಹಾಳಾಗಿದೆ. ಒಟ್ಟಿನಲ್ಲಿ ಈ ದೇವಾಲಯದ ಸ್ತಂಭಗಳೂ ಮೂರ್ತಿಗಳು, ಈಶ್ವರಲಿಂಗ ಆಕರ್ಷಣೆಯವಾಗಿವೆ. ಸಂಗಮೇಶ್ವರ ಗುಡಿಯ ಬಲಕ್ಕೆ ಸ್ತಂಭಾಶಾಸನ ಇದೆ.

| | | |
|---|---|---|
| ೨. **ದೇವಾಲಯ** | : | **ಮಲ್ಲಯ್ಯ ದೇವಸ್ಥಾನ** |
| ಮೂರ್ತಿ | : | ಮಲ್ಲಯ್ಯ ಗಂಗಮಾಳಮ್ಮಾ |
| ಭಂಗಿ | : | ಸುಖಾಸಿನ ಭಂಗಿ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೧ ನೇ ಶತಮಾನ |

| | | |
|---|---|---|
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಸ್ವರೂಪ | : | ಸಮ ಉಬ್ಬು ಶಿಲ್ಪ |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯ :**

ಈ ಮಲ್ಲಯ್ಯ ದೇವಾಲಯ ನಂದವಾಡಗಿಯ ಪ್ರಾಚೀನ ದೇವಾಲಯವಾಗಿದೆ. ಇದು ಚಾಲುಕ್ಯ ಶೈಲಿ ಶಿಲ್ಪವನ್ನು ಹೊಂದಿದೆ. ಈ ಮೂರ್ತಿಗಳನ್ನು ಚೌಕಾಕಾರದ ಕಟ್ಟೆಯ ಮೇಲೆ ಪ್ರತಿಷ್ಠಾಪಿಸಲಾಗಿದೆ. ಮೂರ್ತಿ ಶಿಲ್ಪಗಳು ಕಪ್ಪು ಶಿಲೆಯಿಂದ ನಿರ್ಮಾಣವಾಗಿದೆ. ಸಮ ಉಬ್ಬುಶಿಲ್ಪ ಸ್ವರೂಪವನ್ನು ಹೊಂದಿದ್ದು ಕಲ್ಯಾಣಿ ಚಾಲುಕ್ಯ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ಈ ಗಂಗಮಾಳವ್ವ ಮತ್ತು ಮಲ್ಲಯ್ಯನ ಮೂರ್ತಿಗಳು ಸುಂದರವಾಗಿವೆ. ಈ ದೇವಾಲಯದಲ್ಲಿ ದಿನಾಲು ಪೂಜೆ-ಪುನಸ್ಕಾರ ಮಾಡುತ್ತಾರೆ. ಮತ್ತು ಸಂಕ್ರಮಣದಲ್ಲಿ ಇದರ ಜಾತ್ರೆ ಆಗುತ್ತದೆ.

ಈ ಗುಡಿಯ ಆವರಣದಲ್ಲಿ ಗಜಗೌರಿಯ ಮೂರ್ತಿಯು ಆಕರ್ಷಣೆಯವಾಗಿದೆ. ಹಾಗೂ ನಾಗಮೂರ್ತಿಗಳು ಮತ್ತು ಈಶ್ವರಲಿಂಗ ಈ ಗುಡಿಯ ಆವರಣದಲ್ಲಿವೆ.

ಮಲ್ಲಯ್ಯ ಮತ್ತು ಗಂಗಮಾಳವ್ವ ಈ ಮೂರ್ತಿಗಳ ಸುಖಾಸಿನ ಭಂಗಿಯಲ್ಲಿದ್ದ ಬಲಭಾಗಾದಲ್ಲಿರುವ ಮಲ್ಲಯ್ಯನ ಮೂರ್ತಿಗೆ ನಾಲ್ಕು ಕೈಗಳಿವೆ. ಬಲಗೈಯಲ್ಲಿ ಒಂದು ಡಮರ ಇನ್ನೊಂದು ಕೈಯಲ್ಲಿ ಶೂಲ ಹಿಡಿದಿದ್ದಾನೆ, ಎಡಗೈಯಲ್ಲಿ ಕೆಳ ಕೈಯಲ್ಲಿ ಪಾನ ಪಾತ್ರ ಮೇಲಗೈಯಲ್ಲಿ ತ್ರಿಶೂಲ ಇದೆ.

ಗಂಗಮಾಳಮ್ಮನ ಬಲಗೈಯಲ್ಲಿ ಶೂಲವನ್ನು ಎಡಗೈಯಲ್ಲಿ ಪಾನ ಪಾತ್ರೆಯನ್ನು ಹಿಡಿದ್ದಾಳೆ. ತಲೆಗೆ ಇಬ್ಬರೂ ಕರಂಡ ಮುಕಟ ಧರಿಸಿದ್ದಾರೆ. ಈ ಮೂರ್ತಿಗಳು ಸುಂದರವಾಗಿ ಆಕರ್ಷಣೀಯವಾಗಿವೆ.

**ಮೂರ್ತಿಯ ಆಭರಣ :**

ಮಲ್ಲಯ್ಯ ಮತ್ತು ಗಂಗಮಾಳಮ್ಮನ ಮೂರ್ತಿಗಳು ತಲೆಗೆ ಕರಂಡ ಮುಕುಟ, ಕೈಯಲ್ಲಿ ಡಮರು, ಶೂಲ, ತ್ರಿಶೂಲ, ಪಾನಪಾತ್ರೆ, ಗಂಗಮ್ಮನ ಕೈಯಲ್ಲಿ ಇವೆ. ಕೊರಳಲ್ಲಿ ಹಾರ, ಕೈಯಲ್ಲಿ ಕೈಗಡಗ, ಕಾಲಲ್ಲಿ ಕಾಲ್ಗಡಗ, ಧರಿಸಿದ್ದರೆ ಹೀಗೆ ಈ ಮೂರ್ತಿಯು ಆಭರಣಗಳಿಂದ ಆವೃತ್ತವಾಗಿ ಅತಿ ಸುಂದರವಾಗಿ ಕಾಣುತ್ತವೆ.

| | | |
|---|---|---|
| **ದೇವಾಲಯ** | **:** | **ಮಾರುತಿ ದೇವಾಲಯ** |
| ಮೂರ್ತಿ | : | ವೀರಾಂಜನೇಯ |
| ಭಂಗಿ | : | ತ್ರಿ ಭಂಗಿ |
| ಕಾಲ | : | ೧೧ ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಸಮ ಉಬ್ಬು ಶಿಲ್ಪ |
| ಅಳತೆ | : | ಎತ್ತರ - ೧೨೦ಸೆಂ.ಮೀ. |
| | | ಅಗಲ - ೭೫ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವೈಶಿಷ್ಟ್ಯ :**

ನಂದವಾಡಗಿ ಗ್ರಾಮದ ಊರು ಒಳಗೆ ಈ ಮಾರುತಿ ದೇವಾಲಯ ಇದೆ. ಈ ದೇವಾಲಯದ ಗರ್ಭಗಹದಲ್ಲಿ ವೀರಾಂಜನೇಯ ಮೂರ್ತಿಯು ಇರುತ್ತದೆ. ಇದು ದಕ್ಷಿಣಾಭಿಮುಖವಾಗಿ ನಿಂತಭಂಗಿಯಲ್ಲಿದೆ. ಎಡಗಾಲನ್ನು ಮೇಲಕ್ಕೆ ಎತ್ತಿ ಬಲಗಾಲನ್ನು ಹಿಂದಕ್ಕೆ ಇಟ್ಟಿದ್ದಾನೆ. ಬಲಗೈಯನ್ನು ಅಭಯಹಸ್ತ ಮಾಡಿರುತ್ತಾನೆ. ಎಡಗೈಯಲ್ಲಿ ಗದೆಯನ್ನು ಹಿಡಿದಿರುತ್ತಾನೆ. ಈ ಮೂರ್ತಿಗೆ ಪ್ರಭಾವಳಿ ಇರುತ್ತದೆ.

ವೀರಾಂಜನೇಯ ಮೂರ್ತಿಯ ಆಕರ್ಷಣೀಯವಾಗಿದ್ದು ಪ್ರತಿ ಶನಿವಾರ ಪೂಜೆ ಮಾಡುತ್ತಾರೆ.

**ಆಭರಣಗಳು :**

ಕೊರಳಹಾರ, ಕೈಗಡಗ, ನಡುಪಟ್ಟಿ, ತೋಳಬಂಧಿ, ಕಾಲಗಡಗವನ್ನು ಧರಿಸಿದ್ದಾನೆ.

| | | |
|---|---|---|
| ೩. **ದೇವಾಲಯ** | : | **ಮೂಕದೇವರು** |
| ಶಿಲ್ಪ | : | ಈಶ್ವರ ಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೨ ನೇ ಶತಮಾನ |
| ಸ್ಥಳ | : | ಗರ್ಭಗೃಹ |
| ಶೈಲಿ | : | ರಾಷ್ಟ್ರಕೂಟರ ಶೈಲಿ |
| ಅಳತೆ | : | ಎತ್ತರ - ೭೫ ಸೆಂ.ಮೀ. |
| | | ಅಗಲ - ೬೦ ಸೆಂ.ಮೀ. |

**ಲಿಂಗದ ವಿವರಣೆ :**

ನಂದವಾಡಗಿ ಗ್ರಾಮದಲ್ಲಿರುವ ಪ್ರಾಚೀನ ದೇವಾಲಯಗಳಲ್ಲಿ ಇದೊಂದು ಪ್ರಮುಖವಾಗಿದೆ. ಇದು ರಾಷ್ಟ್ರಕೂಟರ ಶೈಲಿಯಲ್ಲಿ ನಿರ್ಮಿತವಾಗಿದೆ. ಈಶ್ವರಲಿಂಗ ಚೌಕಾಕಾರದ ಎತ್ತರವಾದ ಯೋನಿಯ ಪೀಠದ ಮೇಲೆ ನಿರ್ಮಿತವಾಗಿದೆ. ಈ ಲಿಂಗವು ಕಪ್ಪು ಶಿಲೆಯಿಂದ ಮಾಡಿದ್ದಾಗಿದೆ. ಇ ಲಿಂಗದ ಎದುರಿಗೆ ನಂದಿ ಮೂರ್ತಿ ಇರುವುದು. ಈ ನಂದಿಯು ತನ್ನ ಕಾಲುಗಳನ್ನು ಮಡಚಿ ಕೆಳಗೆ ಕುಳಿತಿರುತ್ತದೆ. ಈ ಲಿಂಗದ ಎದುರಿಗೆ ಇರುವ ನಂದಿಯ ಅಳತೆ ಎತ್ತರ ೪೩ ಸೆಂ.ಮೀ. ಉದ್ದ ೯೩ ಸೆಂ.ಮೀ ಸುತ್ತಳತೆ ೯೫ ಸೆಂ.ಮೀ ಇರುತ್ತದೆ.

**ಶಿಲ್ಪದ ವೈಶಿಷ್ಟ್ಯ :**

ನಂದವಾಡಗಿ ಈ ಪುರಾತನ ಗ್ರಾಮದ ಪ್ರಾಚೀನ ದೇವಾಲಯಗಳ ಮೂರ್ತಿಯ ವಿಶಿಷ್ಟ್ಯತೆ ಅಮೋಘವಾಗಿದೆ. ಇಲ್ಲಿರುವ ಶಿಲಾಮೂರ್ತಿಗಳಾದ ಮಲ್ಲಯ್ಯ, ಗಂಗಮಾಳಮ್ಮ, ಸಪ್ತಮಾತೃಕೆಯರು, ನಾಗಕನ್ಯೆಯರು ಈ ಮೂರ್ತಿಗಳು ಕಪ್ಪು ಶಿಲೆಯಿಂದ ನಿರ್ಮಾಣಗೊಂಡು ಸಮ ಉಬ್ಬುಶಿಲ್ಪವಾಗಿವೆ. ಹಾಗೂ ಅಗಸಿಯ ಮುಂದಿರುವ ವಿಷ್ಣುಚಕ್ರವು ದನಗಳಿಗೆ ಕುಂದು ಬಂದರೆ ಈ ವಿಷ್ಣುಚಕ್ರ ತೊಳೆದ ನೀರಿನಿಂದ ಆ ದನಗಳಿಗೆ ಕೂಡಿಸಿದರೆ ಅವುಗಳು ಆರಾಮವಾಗುತ್ತವೆ ಎಂಬುದು ಇಲ್ಲಿಯ ಜನರ ನಂಬಿಕೆಯಾಗಿದೆ. ಇದೊಂದು ವಿಶಿಷ್ಟ ಪದ್ಧತಿಯಾಗಿದೆ. ಹಾಗೂ ಇಲ್ಲಿಯ ಮೂರ್ತಿಶಿಲ್ಪಗಳು ಸುಂದರವಾಗಿ ಆಕರ್ಷಣೀಯವಾಗಿವೆ.

# ೧೫- ಕಂದಗಲ್ಲ

| | | | | |
|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : ಬಾಗಲಕೋಟ-ಹೈದ್ರಾಬಾದ್ |
| ತಾಲೂಕು | : | ಹುನಗುಂದ | ಜನಸಂಖ್ಯೆ | : ೧೫೦೦೦ |
| ಗ್ರಾಮ | : | ಕಂದಗಲ್ಲ | ಹೋಬಳಿ | : ಇಲಕಲ್ |

**ಸ್ಥಳ ಪರಿಚಯ :-**

ಹುನುಗುಂದ ತಾಲೂಕು ಕೇಂದ್ರದಿಂದ ಆಗ್ನೇಯಕ್ಕೆ ೨೮ ಕಿ.ಮೀ ದೂರದಲ್ಲಿವ ಪುರಾತನ ಗ್ರಾಮವೇ ಕಂದಗಲ್ಲ. ಈ ತಾಲೂಕಿನ ಕಟ್ಟ ಕಡೆಯ ಊರು ಇದಾಗಿದೆ. ಸುಮಾರು ೧೫೦೦೦ ಕ್ಕಿಂತಲೂ ಅಧಿಕ ಜನಸಂಖ್ಯೆ ಹೊಂದಿರುವ ಈ ಪ್ರಾಚೀನ ಗ್ರಾಮು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿದೆ. ಪ್ರಾಚೀನ ಕಾಲದಲ್ಲಿ ಇಲ್ಲಿ ಅರಸು ಮನೆತನಗಳು ಆಳೇದ ಪ್ರತೀಕವಾಗಿ ಅವಶೇಷಗಳು, ಕೋಟೆ ಕೊತ್ತಲಗಳು, ಶಿಲಾಶಾಸನಗಳು, ದೇವಾಲಯಗಳು, ಹುಡೇಗಳು, ಮಹಾಶಿವಶರಣರ ಶಂಕರದಾಸೀಮಯ್ಯನ ಜನ್ಮ ಭೂಮಿಯಾದ ಈ ಗ್ರಾಮು ಗತವೈಭವದ ಇತಿಹಾಸವನ್ನು ಪ್ರತಿಬಿಂಬಿಸುತ್ತದೆ.

೧೨ನೇ ಶತಮಾನದ ಶರಣರ ಯುಗದಲ್ಲಿ ಹೆಸತರಾಂತ ವಚನಕಾರ ಶಂಕರದಾಸೀಮಯ್ಯನಿಗೆ ಜನ್ಮ ನೀಡಿದ ಈ ಗ್ರಾಮದ ಇತಿಹಾಸ ನಿಜವಾಗಲೂ ಸ್ತುತ್ಯರ್ಹವಾದದು. ಊರು ಮುಂದೆ ಇರುವ ಶಿಲಾಮಂಟಪದ ಸ್ವಾಮಿ ಶಂಖರಲಿಂಗ ದೇವಾಲಯ ಮತ್ತು ಸೋಮೇಶ್ವರ ದೇವಾಲಯ, ವೀರಭದ್ರೇಶ್ವರ ದೇವಾಲಯ, ಈಶ್ವರ ದೇವಾಲಯಗಳೂ , ವಾಸ್ತುಶಿಲ್ಪ, ಚಾಲುಕ್ಯಶೈಲಿಯ ಸ್ತಂಭಗಳು, ಮೂರ್ತಿಗಳು, ಕೋಟೆಯ ಗೋಡೆಗಳು, ಮಾನಪ್ಪನ ಮಠ, ಕುದುರೆಬಾವಿ, ಶಿಲಾಮಂಟಪ ಬಾವಿ, ಏಳು ಶಾಸನಗಳು, ಇವು ಈ ಊರಿನ ಇತಿಹಾಸವನ್ನು ಸಾರುವ ಅವಶೇಷಗಳಾಗಿವೆ. ಶಾಸನಗಳಲ್ಲಿ ಕಲ್ಯಾಣಿ ಚಾಲುಕ್ಯರ ಎರಡನೇ ಜಗದೇಕಮಲ್ಲ, ಯಾದವರ ಸಿಂಘಣ, ಗೋವಿಂದಪ್ಪರಸ, ನಾಗಸಿರಿಯವ್ವೆ, ಯಾಚಿಯಣ್ಣ ಮತ್ತು ಯಾದವ ಮಹಾಮಂಡಲೇಶ್ವರ ಪೆರ್ಮದೇವರಸನ ಉಲ್ಲೇಖ ಹಾಗೂ ಸ್ಥಾನಪತಿ ಸರ್ವೇಶ್ವರ ಪಂಡಿತನ ಉಲ್ಲೇಖಗಳು ಈ ಏಳು ಶಾಸನಗಳಲ್ಲಿ ಕಂಡು ಬರುತ್ತವೆ. ಈ ಶಾಸನಗಳನ್ನು ೧೯೨೮-೨೯ ರಲ್ಲಿ ಸೌತ ಇಂಡಿಯನ್ ಇನಸ್ಕ್ರಿಪ್ಯನ್ಸರವರು ಎಲ್ಲ ಶಾಸನಗಳನ್ನು ಪ್ರಕಟಿಸಿದ್ದಾರೆ.

**ಶಾಸನ ಉಲ್ಲೇಖ :**

ಕ್ರಿ.ಶ. ೧೦೧೪ -೧೫ ರ ಒಂದು ಶಾಸನ ಹನುಮಂತ ದೇವರ ಗುಡಿಯ ಆವರಣದಲ್ಲಿದೆ. ಈ ಶಾಸನವು ಈ ಊರನ್ನು "**ಕಂದಗಾಲೆ**" ಎಂದು ಉಲ್ಲೇಖಿಸಿದೆ.

**ಸ್ಥಳ ಐತಿಹ್ಯ :**

ಕಂದಗಲ್ಲ ಗ್ರಾಮವು ಪುರಾತನ ಗ್ರಾಮವಾಗಿದೆ ಎನ್ನುವುದಕ್ಕೆ ಈ ಎಲ್ಲ ಅಂಶಗಳ ಜೊತೆಗೆ ಈ ಊರಿಗೆ ಕಂದಗಲ್ಲ ಎಂಬ ಹೆಸರು ಹೇಗೆ ಬಂದಿತು ಎಂಬುದನ್ನು ಜನಪದೀಯ ಮಾತಿನಲ್ಲಿ ನೋಡಬಹುದು.

ಕಂದಗಲ್ಲನ್ನು ಹಿಂದೆ 'ಸ್ಕಂದಶಿಲೆ', 'ಕಂದಶಿಲೆ'. 'ಕಂದಗಾಲೆ' ಎಂದು ಕರೆಯಲ್ಪಡುತ್ತಿತ್ತು. ಕ್ರಮೇಣ ಪರಿವರ್ತನೆಯಾಗಿ ಕಂದಗಲ್ಲ ಎಂದಾಯಿತು.

**ವಾಸ್ತುಕಲೆ :**

ಕಲಾಭಿಜ್ಞರ ಕಣ್ಮನಗಳಿಗೆ ಹಬ್ಬವನ್ನುಂಟು ಮಾಡುವ ಚಾಲುಕ್ಯರ ವಾಸ್ತು ಮತ್ತು ಕಲೆ ಭಾರತೀಯ ಇತಿಹಾಸದಲ್ಲಿ ಸ್ಮರಣೀಯವಾಗಿದೆ. ಈ ಕಾಲದಲ್ಲಿ ದೇಗುಗಳ ಹುಟ್ಟು ಮತ್ತು ಬೆಳವಣಿಗೆಗಳನ್ನು ಕಾಣಬಹುದು. ಇಂತಹ ಹಲವಾರು ಚಾಲುಕ್ಯರ ದೇವಾಲಯಗಳಲ್ಲಿ ಕಂದಗಲ್ಲ ಗ್ರಾಮದಲ್ಲಿ ವೀರಭದ್ರೇಶ್ವರ ದೇವಾಲಯ, ಶಂಕರಲಿಂಗ ದೇವಾಲಯ, ಸೋಮೇಶ್ವರ ದೇವಾಲಯ, ಈಶ್ವರ ದೇವಾಲಯಗಳು ಚಾಲುಕ್ಯರ ಶೈಲಿಯ ಕಟ್ಟಡ ವಿನ್ಯಾಸಗಳಿಂದ ಈ ದೇವಾಲಯಗಳು ನಿರ್ಮಿತವಾಗಿವೆ.

| | | |
|---|---|---|
| ೧. **ದೇವಾಲಯ** | : | **ವೀರಭದ್ರೇಶ್ವರ** |
| ಮೂರ್ತಿ | : | ವೀರಭದ್ರ |
| ಭಂಗಿ | : | ಸ್ಥಾನಿಕ ಭಂಗಿ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೦ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಸ್ವರೂಪ | : | ಅರ್ಧ ಉಬ್ಬು ಶಿಲ್ಪ |

**ಮೂರ್ತಿ ವೈಶಿಷ್ಟ್ಯ :**

ವೀರಭದ್ರೇಶ್ವರ ದೇವಾಲಯವು ವೈದಿಕ ಸಂಪ್ರದಾಯದ ದೇವಾಲಯವಾಗಿದೆ. ಇದು ಗರ್ಭಗೃಹ ಹಾಗೂ ಮುಖಮಂಟಪವನ್ನು ಹೊಂದಿದೆ. ಈ ದೇಗುಲ ಚೌಕಟ್ಟವಾದ ಗರ್ಭಗೃಹವನ್ನು ಹೊಂದಿದೆ. ಹಾಗೂ ಮುಖಮಂಟಪದಲ್ಲಿ ನಾಲ್ಕು ಸ್ತಂಬಗಳು ಇವೆ. ಗೋಡೆಗೆ ಹೊಂದಿಕೊಂಡು ಅಧರಗಂಬಗಳು ಇರುತ್ತವೆ. ಈ ದೇವಾಲಯದ ಗರ್ಭಗುಡಿ ನೆಲದಡಿಯಲ್ಲಿದೆ. ಈ ದೇವಾಲಯವು ಸಾದಾಕಟ್ಟಡವಾಗಿದೆ. ವಿಶೇಷ ಅಲಂಕಾರ ಹಿತವಾಗಿದೆ ಈ ದೇವಾಲಯವು ಪೂರ್ವಾಭಿಮುಖವಾಗಿದೆ.

ವೀರಭದ್ರೇಶ್ವರ ದೇವಾಲಯದ ಗರ್ಭಗೃಹದಲ್ಲಿ ಎತ್ತರವಾದ ಚೌಕಾಕಾರದ ಪೀಠದ ಮೇಲೆ ವೀರಭದ್ರೇಶ್ವರನ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಈ ಮೂರ್ತಿಯು ಕಪ್ಪು ಶಿಲೆಯದಾಗಿದ್ದು ಅರ್ಧ ಉಬ್ಬು ಶಿಲ್ಪವನ್ನು ಹೊಂದಿದೆ. ಚತುರ್ಭುಜವನ್ನು ಹೊಂದಿದ ಈ ಮೂರ್ತಿಯು ಬಲಬದಿಯ ಮೇಲಿನ ಕೈಯಲ್ಲಿ ಖಡ್ಗವನ್ನು, ಕೆಳಗಿನ ಕೈ ಮುಷ್ಠಿ ಮಾಡಿದೆ. ಎಡಬದಿಯ ಮೇಲಿನ ಕೈಯಲ್ಲಿ ಬಿಲ್ಲು ಬಾಣವಿದೆ. ಅದರ ಕೆಳಗಿನ ಕೈ ನೀಳವಾಗಿ ಕೆಳಗೆ ಚಾಚಿದೆ. ಈ ಮೂರ್ತಿಯ ಶಿರಕ್ಕೆ ಕಿರೀಟಮುಕುಟ, ಕೊರಳಲ್ಲಿ ಹಾರ, ಕೈಗಡಗ, ಕಾಲ್ಗಡಗ, ಹಾಗೂ ತೋಳಪಟ್ಟಿ ಹಾಗೂ ನಡುಪಟ್ಟಿ ಧರಿಸಿದ್ದು ವೀರಭದ್ರೇಶ್ವರ ರೌದ್ರಾವತಾರ ತಾಳಿದ್ದನ್ನು ಈ ಮೂರ್ತಿಯ

ಲಕ್ಷಣಗಳಿಂದ ತಿಳಿಯಬಹುದು.

**ಆಭರಣಗಳು :**

ಶಿವನ ಲೀಲಾವತಾರಗಳಲ್ಲಿ ಒಂದು ಎಂದು ಎಣಿಕೆಯಲ್ಲಿರುವ ಈ ಭುಜಂಗಗಣಭೂಷಿತ ಶಿರಕ್ಕೆ ಕಿರೀಟ ಮುಕುಟ, ಕಿವಿಗೆ ಕರ್ಣಕುಂಡಲ, ಕೊರಳಿಗೆ ಹಾರ, ಕೈಗಡಗ, ಕಾಲ್ಗಡಗ ಹಾಗೂ ತೋಳಪಟ್ಟಿ ಮತ್ತು ನಡಪಟ್ಟಿ ಆಭರಣಗಳನ್ನು ಆಧರಿಸಿ ಉಗ್ರರೂಪದ ಲಕ್ಷಣದಲ್ಲಿದ್ದಾನೆ.

| | | |
|---|---|---|
| ೨. **ದೇವಾಲಯ** | : | **ಸ್ವಾಮಿ ಶಂಕರಲಿಂಗ** |
| ಶಿಲ್ಪ | : | ಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೨ ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಸ್ಥಳ | : | ಗರ್ಭಗೃಹ |
| ಅಳತೆ | : | ಎತ್ತರ - ೪೦ ಸೆಂ.ಮೀ |
| | | ಲಿಂಗದ ಸುತ್ತಳತೆ - ೬೫ ಸೆಂ.ಮೀ. |
| ಸ್ಥಿತಿ | : | ದುಸ್ಥಿತಿ |

**ಮೂರ್ತಿ ವಿವರಣೆ :**

ಈ ಮೂಲ ಶಂಕರಲಿಂಗ ದೇವಾಲಯ ಪೂರ್ವಾಭಿಮುಖವಾಗಿದೆ. ಈ ದೇವಾಲಯದ ಸಭಾಮಂಟಪದಲ್ಲಿ ಭುವನೇಶ್ವರಿ ಮೂರ್ತಿ ಶಿಲ್ಪವು ಸುಂದರವಾಗಿದೆ. ಈ ಗುಡಿಯು ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾಗಿದೆ. ಚೌಕಾಕಾರದ ಗರ್ಭಗೃಹದಲ್ಲಿ ಆಯತಾಕಾರದ ಪೀಠದ ಮೇಲೆ ಈ ಮೂಲ ಲಿಂಗವನ್ನು ನಿರ್ಮಿಸಿದ್ದಾರೆ. ಈ ಲಿಂಗವು ಕಪ್ಪು ಶಿಲೆಯಾಗಿದೆ.

ಶಂಕರದಾಸೀಮಯ್ಯ ಹೊಲಿಗೆಯ ಕಾಯಕ ಮಾಡಿಕೊಂಡು ಈ ಲಿಂಗವನ್ನು ಪೂಜಿಸುತ್ತಿದ್ದರು. ಇತ್ತಿತ್ತಲಾಗಿ ದುಷ್ಕರ್ಮಿಗಳು ನಿಧಿಗಾಗಿ ಭಗ್ನಗೊಳಿಸಿದ್ದಾರೆ.

| | | |
|---|---|---|
| ೩. **ದೇವಾಲಯ** | : | **ಸೋಮೇಶ್ವರ** |
| ಶಿಲ್ಪ | : | ಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೦ ನೇ ಶತಮಾನ |
| ಶಿಲೆ | : | ಕಪ್ಪು ಶಿಲೆ |
| ಶೈಲಿ | : | ಚಾಲುಕ್ಯ ಶೈಲಿ |
| ಅಳತೆ | : | ಎತ್ತರ - ೨೮ ಸೆಂ.ಮೀ |
| | | ಲಿಂಗದ ಸುತ್ತಳತೆ - ೪೦ ಸೆಂ.ಮೀ. |
| ಸ್ಥಿತಿ | : | ದುಸ್ಥಿತಿ |

**ಶಿಲ್ಪದ ವಿವರಣೆ :**

ಈ ದೇವಾಲಯವು ನಾಲ್ಕು ಸ್ತಂಭಗಳನ್ನು ಹೊಂದಿದ್ದು ಈ ದೇವಾಲಯಕ್ಕೆ ಪ್ರದಕ್ಷಿಣಾ ಪಥವನ್ನು ಹೊಂದಿರದಿಲ್ಲದಿರುವುದರಿಂದ ಇದನ್ನು ನಿರಂಧಾರ ದೇವಾಲಯವೆಂದು ಕರೆಯಬಹುದು. ಈ ದೇವಾಲಯದ ಕಟ್ಟಡ ಸಾದಾ ವಾಸ್ತುವನ್ನು ಹೊಂದಿದೆ. ಸಭಾಮಂಟಪವನ್ನು ಹೊಂದಿದ್ದು ಚಾಲುಕ್ಯ ಶೈಲಿಯ ಚೌಕಾಕಾರದ ನಾಲ್ಕು ಕಂಬಗಳನ್ನು ಹೊಂದಿದೆ.

ಈ ದೇವಾಲಯದ ಗರ್ಭಗೃಹದಲ್ಲಿ ಎತ್ತರವಾದ ವೃತ್ತಾಕಾರದ ಪೀಠದ ಮೇಲೆ ಈ ಲಿಂಗವನ್ನು ಸ್ಥಾಪಿಸಲಾಗಿದೆ. ಲಿಂಗದ ಎತ್ತರ - ೨೮ ಸೆಂ.ಮೀ ಲಿಂಗದ ಸುತ್ತಳತೆ - ೪೦ ಸೆಂ.ಮೀ ಇರುತ್ತದೆ. ಈ ಲಿಂಗದ ಎಡ ಮತ್ತು ಬಲದಲ್ಲಿ ಎರಡು ಚಿಕ್ಕ ಲಿಂಗಗಳು ಇರುತ್ತವೆ. ಈ ಲಿಂಗದ ಪೀಠವು ದ್ವಿಪೀಠವಾಗಿದೆ.

| | | |
|---|---|---|
| **೪. ದೇವಾಲಯ** | : | **ಈಶ್ವರ ದೇವಾಲಯ** |
| ಶಿಲ್ಪ | : | ಶಿವಲಿಂಗ |
| ದಿಕ್ಕು | : | ಪೂರ್ವಾಭಿಮುಖ |
| ಕಾಲ | : | ೧೨ ನೇ ಶತಮಾನ |
| ಸ್ಥಳ | : | ಗರ್ಭಗೃಹ |
| ಶಿಲೆ | : | ಕಪ್ಪು ಶಿಲೆ |
| ಶೈಲಿ | : | ಚಾಲುಕ್ಯ ಶೈಲಿ |
| ಅಳತೆ | : | ಎತ್ತರ - ೩೦ ಸೆಂ.ಮೀ |
| | | ಲಿಂಗದ ಸುತ್ತಳತೆ - ೬೪ ಸೆಂ.ಮೀ. |
| ಸ್ಥಿತಿ | : | ಸುಸ್ಥಿತಿ |

**ಶಿಲ್ಪದ ವಿವರಣೆ :**

ಕಂದಗಲ್ಲ ಗ್ರಾಮದಲ್ಲಿ ಬರುವ ಪ್ರಮುಖ ದೇಗುಲಗಳಲ್ಲಿ ಈಶ್ವರ ದೇವಾಲಯವು ಒಂದು ದೇಗುಲಗಳಲ್ಲಿ ಈಶ್ವರದೇವಾಲಯವು ಒಂದು ಪ್ರಮುಖವಾಗಿದೆ. ಈ ದೇವಾಲಯವು ಚಾಲುಕ್ಯ ಶೈಲಿಯ ಸ್ತಂಭಗಳನ್ನು ಹೊಂದಿದೆ. ಆದರೆ ಗರ್ಭಗೃಹ ಪ್ರಾಚೀನ ಕಾಲದ್ದಾಗಿದೆ. ಇತ್ತಿತ್ತಲಾಗಿ ಮುಖಮಂಟಪ ಕಟ್ಟಿಸಿದ್ದಾರೆ. ಈ ದೇವಾಲಯ ಅಲಂಕೃತರಹಿತವಾಗಿದೆ. ಇದು ಚೌಕಟ್ಟಕಾರದ ಗರ್ಭಗೃಹ ಹೊಂದಿದೆ. ವೃತ್ತಾಕಾರದ ಪೀಠದ ಮೇಲೆ ಈ ಕಪ್ಪು ಶಿಲೆ ಲಿಂಗವನ್ನು ಪ್ರತಿಷ್ಠಾಪಿಸಿದ್ದು ಲಿಂಗದ ಎತ್ತರ ೩೦ಸೆಂ.ಮೀ ಲಿಂಗದ ಸುತ್ತಳತೆ ೬೪ ಸೆಂ.ಮೀ ಇರುತ್ತದೆ.

ಈ ಲಿಂಗದ ಎದುರಿಗೆ ನಂದಿಯು ಇರುತ್ತದೆ. ಇದು ನೋಡಲು ಮನೋಹರವಾಗಿದೆ ಕೊರಳಲ್ಲಿ ಗಗರಿಸರ, ಹಣೆಗೆ ಹಣೆಪಟ್ಟಿ ಮಧ್ಯದಲ್ಲಿ ಚಿಕ್ಕ ಗಂಟೆ ಇರುವುದು. ಇದು ಕುಳಿತ ಭಂಗಿಯಲ್ಲಿದೆ. ಇದು ಬಲಗಾಲ ಮುಂದಕ್ಕೆ ಚಾಚಿದ್ದು ಒಂದು ಕಾಲ ಮಡಚಿಕೊಂಡಿದೆ. ಈ ನಂದಿ ವಿಗ್ರಹವು ಸುಂದರವಾಗಿ ವಾಸ್ತುಶಿಲ್ಪದಿಂದ ಅಲಂಕಾರವಾಗಿದೆ.

**ಶಿಲ್ಪದ ವೈಶಿಷ್ಟ್ಯ :**

ಕಂದಗಲ್ಲ ಗ್ರಾಮದ ಚಾಲುಕ್ಯರ ಕಾಲದಲ್ಲಿನ ಶಿಲ್ಪದ ಅಸಾಧಾರಣ ಪ್ರಗತಿಗೆ ವೀರಭದ್ರೇಶ್ವರ ಶಂಕರಲಿಂಗ ಸೋಮೇಶ್ವರ ದೇಗುಲಗಳ ಸಾಕ್ಷಿಯಾಗಿವೆ. ಚಾಲುಕ್ಯ ಶಿಲ್ಪವೆಂದು ಹೆಸರು ಪಡೆದ ಈ ದೇಗುಲಗಳು ಒರಟುಗಲ್ಲವಾದರು ನಯನವಾದ ಮೂರ್ತಿಗಳು ಕೆತ್ತನೆಯಲ್ಲಿ ಪ್ರವೀಣರಾಗಿದ್ದರು ಎಂಬುದಕ್ಕೆ ಅವರ ದೇವಾಲಯಗಳೇ ನಿದರ್ಶನವಾಗಿವೆ. ಚೌಕಾಕಾರವಾದ ಸ್ತಂಭಗಳು ಮೂರ್ತಿಗಳು ಚೌಕಟ್ಟಾಕಾರದ ಗರ್ಭಗೃಹಗಳು, ಭುವನೇಶ್ವರ, ಗರುಡ ಸ್ತಂಭಗಳು, ಅಲಂಕಾರರಹಿತ, ಸಾದಾಗೋಡೆಗಳು ಇವು ಕಂದಗಲ್ಲ ಗ್ರಾಮದ ದೇಗುಲಗಳ ವೈಶಿಷ್ಟ್ಯವಾಗಿದೆ.

ನಿರಾಡಬರತೆ, ಮಾಟವಾದ ಮೈಕಟ್ಟು ಮುಖದ ಮೇಲಿನ ಜೀವಂತ ಕಳೆ, ಇವು ಚಾಲುಕ್ಯ ಮೂರ್ತಿಶಿಲ್ಪದ ವೈಶಿಷ್ಟ್ಯಗಳು.

# ೧೬- ಸೋಮಲಾಪೂರ

| | | | | | |
|---|---|---|---|---|---|
| ಜಿಲ್ಲೆ | : | ಬಾಗಲಕೋಟ | ಮಾರ್ಗ | : | ಇಲಕಲ್-ಕಂದಗಲ್ಲ |
| ತಾಲೂಕು | : | ಹುನಗುಂದ | ಜನಸಂಖ್ಯೆ | : | ೧೨೦೦ |
| ಗ್ರಾಮ | : | ಸೋಮಲಾಪೂರ | ಹೋಬಳಿ | : | ಇಲಕಲ್ |

**ಸ್ಥಳ ಪರಿಚಯ :**

ಹುನುಗುಂದ ತಾಲೂಕು ಕೇಂದ್ರದಿಂದ ಆಗ್ನೇಯಕ್ಕೆ ಸೋಮಲಾಪೂರ ೩೦ ಕಿ.ಮೀ ದೂರದಲ್ಲಿದೆ. ಈ ಗ್ರಾಮವು ಐತಿಹಾಸಿಕ ಪ್ರಸಿದ್ಧಿ ಪಡೆದಿದೆ ಇಲ್ಲಿ ಬಸವೇಶ್ವರ ದೇವಾಲಯವು ಪ್ರಸಿದ್ಧಿ ಪಡೆದಿದೆ. ಈ ದೇವಾಲಯದ ಸ್ತಂಭಗಳು ಚಾಲುಕ್ಯ ಶೈಲಿಯಲ್ಲಿ ನಿರ್ಮಾಣಗೊಂಡಿವೆ. ಸೋಮಲಾಪೂರ ಅತಿ ಚಿಕ್ಕ ಗ್ರಾಮವಾಗಿದೆ. ಆದರೆ ಇಂದು ನಮ್ಮ ನಾಡಿನಲ್ಲಿ ಅಷ್ಟೇ ಅಲ್ಲಾ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರದಿಂದ ದೇವಾಲಯದ ಪೂಜೆಗಾಗಿ ತಂಡೋಪ ತಂಡವಾಗಿ ಇಲ್ಲಿಗೆ ಭಕ್ತಾಧಿಗಳು ಬರುತ್ತಾರೆ ಯಾಕೆಂದರೆ ಪಾರ್ಶ್ವವಾಯು, ಉದರರೋಗ, ದಮ್ಮು, ಮೂತ್ರಪಿಂಡ, ರೋಗದಿಂದ ಬಳಲುತ್ತಿರುವ ರೋಗಿಗಳಿಗೆ ಬಸವತೀರ್ಥ ಒಂದು ಸಂಜೀವಿನಿಯಾಗಿದೆ. ಈ ಬಸವತೀರ್ಥ ಸೇವಿಸಿದರೆ ಈ ಮೇಲಿನ ರೋಗಾದಿಗಳಿಂದ ಮುಕ್ತರಾಗುತ್ತಾರೆ. ಎಂಬುದು ಬಸವತೀರ್ಥ ಸೇವಿದವರ ಪ್ರಶಂಸಿಸುತ್ತಾರೆ.

ಪ್ರತಿ ವರ್ಷ ಶ್ರಾವಣ ಮಾಸದ ಸೋಮವಾರ ಬಸವಣ್ಣನ ಜಾತ್ರೆವಿಜ್ರಂಭಣೆಯಿಂದ ನಡೆಯುತ್ತದೆ. ಆಗ ನಾಡಿನ ನಾನಾಭಾಗಗಳಿಂದ ಜನರು ಈ ಪುಣ್ಯ ಕ್ಷೇತ್ರದಲ್ಲಿ ಪಾಲ್ಗೊಳ್ಳುತ್ತಾರೆ.

**ಸ್ಥಳ ಐತಿಹ್ಯ :**

ಈ ಗ್ರಾಮಕ್ಕೆ ಯಾವುದೇ ಐತಿಹಾಸಿಕ ಕುರುಹುಗಳು ಸಮರ್ಪಕವಾಗಿ ಲಭ್ಯವಿಲ್ಲ. ಆದರಿಂದ ಆ ಗ್ರಾಮದ ಜನಪದ ಹಿನ್ನಲೆಯಲ್ಲಿ ಮೊದಲು "ಚಂದ್ರಲಾಪೂರ" ಎಂದು ಕರೆಯುತ್ತಿದ್ದರು. ಆದರೆ ಕ್ರಮೇಣ ಜನರ ಬಾಯಿಂದ ಬಾಯಿಗೆ ಈ ಶಬ್ದಗಳು ಉಚ್ಚಾರದಲ್ಲಿ ಪರಿವರ್ತನೆಯಾಗಿ ಸೋಮಲಾಪೂರ ಎಂದು ಹೆಸರು ಬಂದಿತು ಎಂಬುದು ಈ ಊರಿನ ಜನರ ಹೇಳಿಕೆ.

**ವಾಸ್ತು ಕಲೆ :**

ಈ ದೇವಾಲಯಕ್ಕೆ ಮೊದಲು ಗರ್ಭಗೃಹ ಒಂದೇ ನಿರ್ಮಿತವಾಗಿತ್ತು. ಆದರೆ ಕ್ರಮೇಣ ಇತ್ತಿತಲಾಗಿ ಮುಖಮಂಟಪ ನಿರ್ಮಿಸಿದ್ದಾರೆ. ಗರ್ಭಗೃಹವು ಪ್ರಾಚೀನ ವಾಸ್ತುವಾಗಿರುತ್ತದೆ. ಅದು ಚಾಲುಕ್ಯ ಶೈಲಿಯನ್ನು ಹೊಂದಿರುತ್ತದೆ.

| | | |
|---|---|---|
| ೧. ದೇವಾಲಯ | : | ಬಸವೇಶ್ವರ |
| ಶಿಲ್ಪ | : | ಬಸವಣ್ಣ |
| ದಿಕ್ಕು | : | ಉತ್ತರಾಭಿಮುಖ |
| ಭಂಗಿ | : | ಕುಳಿತ ಭಂಗಿ |
| ಕಾಲ | : | ೧೬ನೇ ಶತಮಾನ |

| | | |
|---|---|---|
| ಶಿಲೆ | : | ಕಪ್ಪು ಶಿಲೆ |
| ಅಳತೆ | : | ಉದ್ದ - ೫೬ ಸೆಂ.ಮೀ |
| | | ಎತ್ತರ- ೩೮ ಸೆಂ.ಮೀ |
| ಸ್ಥಿತಿ | : | ಸುಸ್ಥಿತಿ |

**ಶಿಲ್ಪದ ವೈಶಿಷ್ಟ್ಯ :**

ಈ ದೇವಾಲಯದ ಗರ್ಭಗೃಹವು ಚಾಲುಕ್ಯ ಶೈಲಿಯ ವಾಸ್ತುವಿನ್ಯಾಸವನ್ನು ಹೊಂದಿದೆ. ಗರ್ಭಗೃಹದಲ್ಲಿ ಈ ಬಸವ ನೆಲೆಸಿದ್ದಾನೆ. ಇದರ ಒಂದು ಹಿನ್ನಲೆಯ ಪ್ರಕಾರ ಮೂಲತಃ ಈ ಬಸವಣ್ಣ ಬಾಗಲಕೋಟ ಜಿಲ್ಲೆಯ ಹಳ್ಳೂರಿನಿಂದ ಕಾಡುಕಲ್ಲಿನ ರೂಪದಲ್ಲಿ ಇಲ್ಲಿಯ ತಿಪ್ಪೆಯಲ್ಲಿ ನೆಲೆಸಿದನೆಂದು ತಿಪ್ಪೆಯಲ್ಲಿದ್ದ ಕಾಡು ಕಲ್ಲಿಗೆ ಕೋಡು ಮೂಡಿ ಬಸವಣ್ಣನಾದನೆಂದು ನಂತರ ಅದೇ ತಿಪ್ಪೆಯನ್ನು ಹಸನಗೊಳಿಸಿ ಗುಡಿಮಾಡದಿದರೆಂದು ಹೇಳಲಾಗುತ್ತದೆ.

ವೃಷಭನ ಮೂರ್ತಿ ಎತ್ತರದ ಚೌಕಾಕಾರದ ಪೀಠದ ಮೇಲೆ ನಿರ್ಮಿಸಲಾಗಿದೆ. ಎರಡು ಕಾಲುಗಳನ್ನು ಮಡಚಿಕೊಂಡು ಕುಂತಿದೆ. ಈ ವಿಗ್ರಹವು ಕಪ್ಪು ಶಿಲೆಯಾಗಿದೆ ಹಾಗೂ ನುಣುಪಾಗಿ ಹೊಳೆಯುತ್ತದೆ. ಈ ವೃಷಭನಿಗೆ ಹಣೆಗೆ ಹಣೆಪಟ್ಟಿ, ಕೊಂಬಿಗೆ ಕೊಂಬುಣಸು, ಕೊರಳಲ್ಲಿ, ಗೆಜ್ಜೆಸರ ಧರಿಸಿ ಉತ್ತರಾಭಿಮುಖವಾಗಿ ಕುಳಿತಿದೆ.

**ವೃಷಭನ ಆಭರಣಗಳು :**

ಕೊರಳಲ್ಲಿ ಗಗರಿಸರ, ಹಣೆಗೆ ಹಣೆಪಟ್ಟಿ, ಕೊರಳಲ್ಲಿ ಗೆಜ್ಜೆಸರ, ಕೊಂಬಿಗೆ ಕೊಂಬಣಸ್ ಕಾಲಲ್ಲಿ ಕಾಲ್ಗಡಗ ಧರಿಸಿ ಈ ವಿಗ್ರಹವು ಆಭರಣಗಳಿಂದ ನಯವಾಗಿ ಕಾಣಿಸುತ್ತದೆ.

| | | |
|---|---|---|
| ೨. ದೇವಾಲಯ | : | ವೀರಾಂಜನೇಯ |
| ಮೂರ್ತಿ | : | ವೀರಾಂಜನೇಯ ಮೂರ್ತಿ |
| ದಿಕ್ಕು | : | ದಕ್ಷಿಣಾಭಿಮುಖ |
| ಭಂಗಿ | : | ದ್ವಿಭಂಗಿ |
| ಸ್ವರೂಪ | : | ಅರ್ಧ ಉಬ್ಬುಶಿಲ್ಪ |
| ಕಾಲ | : | ೧೬ನೇ ಶತಮಾನ |
| ಸ್ಥಳ | : | ಗರ್ಭಗೃಹ |
| ಅಳತೆ | : | ಎತ್ತರ- ೯೦ ಸೆಂ.ಮೀ |
| | | ಅಗಲ- ೬೦ ಸೆಂ.ಮೀ |
| ಸ್ಥಿತಿ | : | ಸುಸ್ಥಿತಿ |

**ಮೂರ್ತಿಯ ವಿವರಣೆ :**

'ಸೋಮುಲಾಪೂರದಲ್ಲಿ ಊರು ಹೊರಗೆ ಈ ದೇವಾಲಯವಿದೆ. ಇದರ ಗರ್ಭಗೃಹದಲ್ಲಿ ಈ ಆಂಜನೇಯ ಮೂರ್ತಿಯನ್ನು ನಿರ್ಮಿಸಿದ್ದಾರೆ. ಇದು ಕಪ್ಪುಶಿಲೆಯಾಗಿದ್ದು ಏಕಶಿಲೆಯಲ್ಲಿ ಈ ಮೂರ್ತಿ ಇರುವುದನ್ನು ಕಾಣಬಹುದು. ಈ ಮಾರುತಿಗೆ ಎರಡು ಕೈಗಳಿದ್ದು ಬಲಗೈಯನ್ನು ಅಭಯ ಹಸ್ತಮಾಡಿದ್ದಾನೆ. ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ಉದ್ದವಾದ ಬಾಲವಿದೆ. ಇದು ಸುತ್ತುವರಿಯಲ್ಪಟ್ಟಿದೆ. ಈ ಮೂರ್ತಿಯ ಪೂರ್ವಕಡೆ ಮುಖಮಾಡಿ ನಿಂತಿದೆ.

ಪ್ರತಿ ಶನಿವಾರ ಈ ಹಳ್ಳಿಯ ಜನರು ಇಂದಿಗೂ ಚೇನೆ, ಪೀಡೆ, ಕಾಟ ಮೊದಲಾದವುಗಳನ್ನು ಪರಿಹರಿಸುವದು ಈ ಮಾರುತಿಯೆಂದು ನಂಬಿ ಪೂಜಿಸುತ್ತಾರೆ. ಇದರಿಂದ ಜಾನಪದ ನೆಲೆಯನ್ನು ನಾವು ಕಡೆಗಣಿಸಲಾಗದು.

**ಶಿಲ್ಪದ ವೈಶಿಷ್ಟ್ಯ :**

ಸೋಮಲಾಪೂರ ಗ್ರಾಮದ ಬಸವೇಶ್ವರ ಮತ್ತು ಮಾರುತಿ ದೇವಾಲಯದ ಇತಿಹಾಸ ಪರಿಪೂರ್ಣವಾದದು. ಬಸವನತೀರ್ಥದ ಸೇವನೆಯಿಂದ ಸಾವಿರಾರು ಜನರು ಪ್ರಶಂಸನೀಯ ವಿಚಾರದಿಂದ ಈ ದೇವಾಲಯ ವಿಶಿಷ್ಟ್ಯತೆ ದಿನ -ದಿನಕ್ಕೆ ಹೆಚ್ಚುತ್ತಲಿದೆ ಇಲ್ಲಿಯ ಶಿಲ್ಪ ಕೆತ್ತನೆಯ ಉತ್ಕೃಷ್ಟವಾದದುದಾಗಿದೆ.

# ಅಧ್ಯಾಯ - ಆರು
# ಉಪಸಂಹಾರ

ಭಾರತ ಖಂಡದ ಸಂಸ್ಕೃತಿಯ ಚೌಕಟ್ಟಿನಲ್ಲಿ ಅಳವಟ್ಟು ಸುಂದರವಾಗಿ ಅರಳಿರುವ ಸಂಸ್ಕೃತಿ ಕುಸುಮಗಳಲ್ಲಿ ಹುನಗುಂದ ಪ್ರದೇಶದ ಸ್ಥಾನ ಬಹಳ ಹಿರಿದು ಮತ್ತು ವಿಶಿಷ್ಟವಾದದ್ದು. ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ ಧಾರ್ಮಿಕದರ್ಶನದ ದಿವ್ಯದೃಷ್ಠಿಯಲ್ಲಿ, ಸಾಹಿತ್ಯ ಸೃಷ್ಟಿಯ ರಸಮಾರ್ಗದಲ್ಲಿ, ಮೂರ್ತಿಗಳು ಸಂಗೀತಾದಿಗಳ ಕಲೋಪಾಸನೆಯಲ್ಲಿ - ಹೀಗೆ ಜೀವನದ ಎಲ್ಲ ರಂಗಗಳಲ್ಲಿಯೂ ಹುನಗುಂದ ಪ್ರದೇಶ ಸಾಧನೆ ಸಾರ್ಥಕತೆಯನ್ನು ಪಡೆದಿದೆ. ಅತಿ ಪ್ರಾಚೀನ ಕಾಲದಿಂದಲೂ ಕರ್ನಾಟಕದ ಸಂಸ್ಕೃತಿಗೆ ತನ್ನದೆ ಆದ ಉಜ್ವಲ ಪರಂಪರೆಯನ್ನಿತ್ತ ಅದನ್ನು ಬೆಳಸಿಕೊಂಡು ಬಂದಿದೆ. ಹುನಗುಂದ ಪ್ರದೇಶದಲ್ಲಿ ಮೂರ್ತಿಶಿಲ್ಪಗಳ ಅಧ್ಯಯನ ಅಷ್ಟಾಗಿ ನಡೆದಿಲ್ಲವೆಂದು ಮನಗೊಂಡು ಈ ದಿಶೆಯಲ್ಲಿ ನಾನು ಮಾಡಿದ ಪ್ರಮಾಣಿಕ ಪ್ರಯತ್ನವೇ ಈ ಪ್ರಬಂಧ ರಚನೆಗೆ ಸಾಧ್ಯವಾಯಿತೆಂದು ಹೆಳಬಹುದು.

ಹುನಗುಂದ ಪ್ರದೇಶದಲ್ಲಿ ಹೀಗಾಗಲೇ ದೇವಾಲಯ, ಮೂರ್ತಿಶಿಲ್ಪ, ಶಾಸನಗಳ ಮೇಲಿನ ಲೇಖನಗಳನ್ನು ಅಧ್ಯಯನ ಮಾಡಿ ಅವುಗಳನ್ನು ಆಧಾರವಾಗಿಟ್ಟುಕೊಂಡು, ಈ ಪ್ರದೇಶದಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡು ಅಧ್ಯಯನದ ಸಮಗ್ರತೆಗೆ ಆಧಾರಗಳನ್ನು ತಂದುಕೊಡಲು ಪ್ರಯತ್ನಿಸಿದ್ದೇನೆ.

168 ಗ್ರಾಮಗಳನ್ನು ಹೊಂದಿರುವ ಹುನಗುಂದ ತಾಲೂಕಿನಾದ್ಯಾಂತ 138 ಶಾಸನಗಳು ಲಭ್ಯವಿದ್ದ ಇದರ ಮೇಲೆ ಬೆಳಕು ಚೆಲ್ಲುತ್ತವೆ. ಆದರೆ ಪ್ರತಿಯೊಂದು ಗ್ರಾಮಕ್ಕೆ ಭೇಟಿ ನೀಡಿ ದೇವಾಲಯ ಹಾಗೂ ಮೂರ್ತಿಶಿಲ್ಪ ಬಗ್ಗೆ ಮಾಹಿತಿ ಪಡೆಯುವದು ಕಷ್ಟಸಾಧ್ಯ. ಪ್ರಾಚೀನ ಕಾಲದಲ್ಲಿ ನಿರ್ಮಿಸಲ್ಪಟ್ಟು ದೇವಾಲಯಗಳ ಆಧಾರದ ಮೇಲೆ ಶಾಸನಗಳ ಆಧಾರದ ಮೇಲೆ , ಸ್ಥಳಿಯ ಜನರು ಹೇಳುವ ದಂತಕಥೆ, ದೇವಾಲಯಗಳ ಪೂಜಾರಿಗಳ ಹೇಳಿಕೆಯಿಂದ ಮೂರ್ತಿಶಿಲ್ಪದ ಬಗ್ಗೆ ನಿಖರ ಮಾಹಿತಿ ಸಂಗ್ರಹವಾಗುವದಿಲ್ಲ. ಯಾಕೆಂದರೆ ಈ ಪ್ರದೇಶದಲ್ಲಿ ಬದಾಮಿ ಚಾಲುಕ್ಯರ, ರಾಷ್ಟ್ರಕೂಟರು, ಕಲ್ಯಾಣಿಚಾಲುಕ್ಯರು, ಕಲ್ಯಾಣಿ ಕಲೂಚೂರಿಗಳು, ವಿಜಯನಗರ ಅರಸರು, ಆದಿಲ್‌ಷಾಹಿಗಳು, ದೇವಗಿರಿ ಯಾದವರು ಮುಂತಾದ ರಾಜಮನೆತದವರು, ಮಾಂಡಲೀಕರ ಹುನಗುಂದ ತಾಲೂಕಿನಲ್ಲಿ ಆಡಳಿತ ಮಾಡಿದ್ದಾರೆ. ಆ ಅವಧಿಯ ಕಾಲಾನುಕ್ರಮವಾಗಿ ಶಿಲ್ಪಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಹುನಗುಂದ ಪ್ರದೇಶದ, ಐಹೊಳೆ, ಅರಿಸಿಬೀದಿ, ಗೂಡೂರು, ಇಲ್ಯಾಳ, ಚಿತ್ತರವಾಡಗಿ, ಇಲಕಲ್, ಹುನಗುಂದ, ಶಿಂಗನಗುತ್ತಿ, ನಂದವಾಡಗಿ, ಕಂದಗಲ್, ಕೂಡಲಸಂಗಮ ಪ್ರದೇಶಗಳಲ್ಲಿ ಚಾಲುಕ್ಯರ, ರಾಷ್ಟ್ರಕೂಟರ, ಕಲುಚೂರಿಗಳು, ರಾಜ್ಯಭಾರ ಮಾಡಿದ ಬಗ್ಗೆ ಸಾಹಿತ್ಯಶಾಸನ ಲಭ್ಯವಾಗಿವೆ. ಇವರು ಪ್ರಾಚೀನ ಧರ್ಮಗಳಾದ ಜೈನ , ಬೌದ್ಧ , ಶೈವ, ಧರ್ಮಗಳನ್ನು ಅನುಸರಿಸಿದರು ಎಂಬುದು ಸುಸ್ಪಷ್ಟವಾಗಿದೆ.

ಹುನಗುಂದ ಪ್ರದೇಶದ ಇತಿಹಾಸ ಅತ್ಯಂತ ಪ್ರಾಚೀನವೆಂದು ಕಂಡು ಬಂದರೂ ಇಲ್ಲಿನ ದೇವಾಲಯಗಳ ಕ್ರಿ.ಶ. 8 ಮತ್ತು 10ನೇ ಶತಮಾನದ ಅವಧಿಯಲ್ಲಿ ನಿರ್ಮಾಣವಾದಂತವುಗಳು ಆ ದೇವಾಲಯಗಳಲ್ಲಿ ನಾಗರ, ದ್ರಾವಿಡ, ವೇಸರ, ಶೈಲಿಯಲ್ಲಿ ನಿರ್ಮಾಣವಾಗಿವೆ. ಆದರೆ ದೇವಾಲಯಗಳಲ್ಲಿ ದೊರೆಯುವ ಮೂರ್ತಿಶಿಲ್ಪಗಳು ವೈಶಿಷ್ಟತೆಯಿಂದ ಕೂಡಿವೆ. ಶಾಸ್ತ್ರಿಯ ಕಲಾಪರಂಪರೆಗೆ ಸೇರಿದ ಶಿಲ್ಪಗಳಲ್ಲಿದೆ. ಸ್ಥಳಿಯ ಜಾನಪದ ಶೈಲಿಯ ಸಾವಿರಾರು ಕಲಾಕೃತಿಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಅವುಗಳನ್ನು ವಿಂಗಡಣೆ ಮಾಡಿ ಪ್ರತಿಮಾ ಲಕ್ಷಣಗಳ ಆಧಾರ ಮೇಲೆ ಅವುಗಳ ಲಕ್ಷಣಗಳನ್ನು ಸುಸ್ಪಷ್ಟವಾಗಿ ಗುರ್ತಿಸಬಹುದು.

ಸಾಂಸ್ಕೃತಿಕವಾಗಿ ಧಾರ್ಮಿಕವಾಗಿ ಶೈಕ್ಷಣಿಕವಾಗಿ ಈ ಪ್ರದೇಶ ಉಜ್ವಲ ಸಂಸ್ಕೃತಿಯನ್ನು ಹೊಂದಲು ಇಲ್ಲಿ ನಂಬಿಗೆಗೆ ಅನುಗುಣವಾಗಿ ದೇವಾಲಯಗಳ ಜೊತೆಗೆ ಮೂರ್ತಿಶಿಲ್ಪಗಳು ನಿರ್ಮಾಣವಾದವು. ದೇವಾಲಯ ಜ್ಞಾನದ ದೇಗುಲಗಳಾಗಿ ಗುರುಕುಲಗಳಾಗಿ, ಘಟಿಕಾಸ್ಥಾನಗಳಾಗಿ, ಬ್ರಹ್ಮಾಪುರಿಗಳಾಗಿ, ಅಗ್ರಹಾರಗಳಾಗಿ, ದೇಗುಲಗಳ ಮನಷ್ಯನ ನಂಬಿಕೆಗೆ ಜ್ಞಾನದ ಜ್ಯೋತಿಯಂತಾದವು. ಈ ನಂಬಿಗೆಯ ಮೂರ್ತಿಶಿಲ್ಪಗಳ ಉಗಮಕ್ಕೆ ಕಾರಣವಾದವು.

ಪ್ರತಿಮಾರಾಧನೆಯು ಅವಶ್ಯಕತೆ ಹೆಚ್ಚಿದಂತೆಲ್ಲಾ ದೇಶದಲ್ಲಿ ಪ್ರತಿಮೆಗಳ ಸೃಷ್ಟಿ ಹಾಗೂ ಪ್ರಮಾಣವೇ ಮುಂತಾದವುಗಳನ್ನು ವಿಧಿಸುವ ಶಾಸ್ತ್ರಗಳೂ ಬೆಳೆದುಬಂದವು. ಮೂರ್ತಿಶಿಲ್ಪದ ಹೆಗ್ಗುರುತು ಅದರಲ್ಲಿನ ಚಿಹ್ನೆ, ಲಿಂಗ ಅಥವಾ ಸಂಜ್ಞ ಭಾರತೀಯ ಪ್ರತಿಮಾ ಶಿಲ್ಪದಲ್ಲಿರುವಷ್ಟು ಮತ್ತೆಲ್ಲಿಯೂ ಇಲ್ಲಾ. ಈ ಚಿಹ್ನಾಂಶದಿಂದ ಪ್ರತಿಮೆಯ ಮೂಲ ದೇವತೆಯನ್ನು ಭಕ್ತನಾದವನು ಗುರ್ತಿಸಬಹುದು, ಅಷ್ಟೇ ಅಲ್ಲದೆ ಪ್ರತಿಮಾ ಶಾಸ್ತ್ರಗಳು ವಿಗ್ರಹಗಳಿಗೆ ತಕ್ಕದಾದ ವಸ್ತುಗಳನ್ನು ಆಧಾರಗಳನ್ನು ಸೂಚಿಸುತ್ತವೆ.

ಹುನಗುಂದ ಪ್ರದೇಶದಲ್ಲಿ ಮೂರ್ತಿಶಿಲ್ಪಗಳ ಪ್ರಬೇದವನ್ನು ಗುರ್ತಿಸುವುದು ಕಷ್ಟಸಾಧ್ಯ ಆದರೂ ಸಹ ವಿವಿಧ ಧರ್ಮಗಳ ಚರಿತ್ರೆಯನ್ನು, ದೇವತೆಗಳನ್ನು ಕೂಲಂಕುಷವಾಗಿ ಅಧ್ಯಾಯ ಮಾಡಿದಾಗ ಶಿಲ್ಪಗಳ ಚರಿತ್ರೆ ತಿಳಿಯಬಹುದು. ವಿಷ್ಣು, ಇಂದ್ರ, ಕುಬೇರ, ಮುಂತಾದ ರಾಜತ್ವಪಂಕ್ತಿಗೆ ಸೇರಿದ ವಿಗ್ರಹಗಳಿಗೆ ರಾಜರಿಗೆ ತಕ್ಕುದಾದ ಉಡುಪು, ಶಿವ, ಬ್ರಹ್ಮಾ, ಅಗ್ನಿ ಪ್ರತಿಮೆಗಳಿಗೆ ಧ್ಯಾನಕ್ಕೆ ತಕ್ಕ ಯೋಗಿಯ ವಸನಗಳು ಕ್ಲುಪ್ತವಾಗಿವೆ. ಸೂರ್ಯ, ಸ್ಕಾಂಧರ, ಪ್ರತಿಮೆಗಳಿಗೆ ಯೋಧರ ಉಡುಪು ವಿಹಿತವಾಗಿದೆ. ದೇವಿಯರ ಪ್ರತಿಮೆಗಳಿಗೆ ಕೌಸ್ತುಭ, ಕುಂಡಲ, ಕಿರೀಟ, ಜಟಾಮುಕಟ ಕಂಡಿರಿಸಲಾಗುತ್ತದೆ. ಪ್ರತಿಮೆಗಳಿಗೆ ಬೇಕಾದ ಅನೇಕ ವಿಧದ ಪೀಠಗಳು-ಭದ್ರಪೀಠ, ಪದ್ಮಪೀಠ, ವಜ್ರಪೀಠ, ಸೌಮ್ಯಕ, ಶ್ರೀಕಾಮ್ಯವೆಂದ ತಿಳಿಸಲಾಗಿದೆ, ಹೀಗೆ ಪ್ರತಿಮೆಗಳು ಪ್ರತಿಮಾ ಆಧಾರದ ಮೇಲೆ ರಚಿತವಾಗಿರುತ್ತದೆ.

ಹುನಗುಂದ ಪ್ರದೇಶದ ಕ್ಷೇತ್ರಕಾರ್ಯಗಳನ್ನು ಕೈಕೊಂಡಾಗ, ಜೈನಮೂರ್ತಿಗಳು, ಶೈವಮೂರ್ತಿಗಳ, ವೈಷ್ಣವಮೂರ್ತಿಗಳ, ಶಾಕ್ತಮೂರ್ತಿಗಳು, ಗಣಪತಿ ಮೂರ್ತಿಗಳು, ಸ್ಮಾರಕಗಳ ಶಿಲ್ಪಗಳು ದೇವಾಲಯದ ಹೊರಭಾಗ ಹಾಗೂ ಒಳಭಾಗಗಳಲ್ಲಿ ಕಂಡುಬಂದವು. ದೇಗುಲಗಳ ಆವರಣದಲ್ಲಿ ಶಿಲ್ಪಗಳು ಚದುರಿದಂತೆ ಬಹುತೇಕ ಗ್ರಾಮಗಳಲ್ಲಿ ಕಂಡು ಬಂದವು. ಅವುಗಳಲ್ಲಿ ನಾಗದೇವತೆಯ ಬಿಡಿಶಿಲ್ಪಗಳು ಹೆಚ್ಚು ಕಂಡು ಬಂದವು.

ಪರಧರ್ಮ ಸಹಿಷ್ಣತವಾದಿಗಳಾಗಿದ್ದ ಪ್ರಾಚೀನ ಕಾಲದ ರಾಜರು, ರಾಣಿಯರು, ದಂಡನಾಯಕರು, ಸಾಮಂತರು, ದೇವಾಲಯಗಳ ಕಟ್ಟಡ, ಜೀರ್ಣೋದ್ಧಾರ, ಪೂಜೆ ಪುನಸ್ಕಾರ, ಸಾರ್ವಜನಿಕ ಕಾರ್ಯಗಳಿಗೆ, ವರಹ, ಸಪ್ತಮಾತೃಕೆನಾರಶಿಲ್ಪ ಕೆತ್ತಿಸಿದರೆ, ಶೈವ ಗರ್ಭಗೃಹದಲ್ಲಿ ಶಿವಲಿಂಗ, ನಂದಿವಿಗ್ರಹ, ಶಿವನ ಅವತಾರ ಶಿಲ್ಪಗಳನ್ನು ಕೆತ್ತಿಸಿದರು. ಜೈನರ ಮೂರ್ತಿಶಿಲ್ಪಕ್ಕೆ ಹೆಚ್ಚಿನ ಆದ್ಯತೆ. ತೀರ್ಥಂಕರ ವಿಗ್ರಹಗಳನ್ನು ಕೆತ್ತಿದರೆ, ಬೌದ್ಧರು ಬುದ್ಧನ ತಪಸ್ಸಿನ ಸನ್ನಿವೇಶ, ಜ್ಞಾನೋದಯ ಸನ್ನಿವೇಶ ಶಿಲ್ಪಗಳಲ್ಲಿ ಶಿಲ್ಪಿ ಕಂಡಿರಿಸಿದನು. ಈ ಎಲ್ಲ ಪ್ರತಿಮೆಗಳುನ್ನು ಶಿಲ್ಪ ಪ್ರತಿಮಾ ಲಕ್ಷಣದ ಆಧಾರದ ಮೇಲೆ ನಿರ್ಮಿಸಿದರು. ಇತಿಹಾಸದಲ್ಲಿ ಯಾವುದೇ ಪ್ರದೇಶವು ಸಂಶೋಧನೆಯ ದೃಷ್ಟಿಯಿಂದ ಪರಿಪೂರ್ಣವಾಗಲಾರದು, ಆದರೂ ಸಹ ಹುನಗುಂದ ಪ್ರದೇಶದಲ್ಲಿನ ಮೂರ್ತಿಶಿಲ್ಪಗಳ ಬಗ್ಗೆ ವಿವರವಾದ ಅಧ್ಯಯನ ಮಾಡಿ ವಿಶ್ಲೇಷಣೆ ಒಳಪಡಿಸಲು ಪ್ರಯತ್ನಸಿದ್ದೇನೆ. ಸ್ವಲ್ಪ ಮಟ್ಟಿಗಾದರೂ ಈ ನನ್ನ ಸಂಶೋಧನೆ ಮೂರ್ತಿಶಿಲ್ಪಗಳ ಅಧ್ಯಯನಕ್ಕೆ ಪೂರಕ ದಾಖಲೆಯಾಗಬಹುದು ಎಂಬದನ್ನು ನಂಬಿದ್ದೇನೆ,

ಮೂರ್ತಿಶಿಲ್ಪ ಅಧ್ಯಯನಕ್ಕೆ ಬೇಕಾದ ವಿಷಯಗಳನ್ನು, ಶಾಸನಗಳು, ದೇವಾಲಯಗಳ, ಸಾಹಿತ್ಯಗಳ, ಆಧಾರವಾಗಿಟ್ಟುಕೊಂಡು ಛಾಯಾಚಿತ್ರಗಳನ್ನು ತೆಗೆದು ಕಾಲಾನುಕ್ರಮವಾಗಿ ವ್ಯವಸ್ಥಿತವಾದ ರೀತಿಯಲ್ಲಿ ಜೋಡಿಸಿ ವಿವರಸಲಾಗಿದೆ. ಆದರೂ ಸಹ ಇನ್ನೂ ಕೆಲವು ಪ್ರದೇಶಗಳ ಸಂಗತಿಗಳ ಕಣ್ಣೂ-ತಪ್ಪಿ ಉಳಿದಿರಬಹುದು. ಮೂರ್ತಿಶಿಲ್ಪದ ಸಮಗ್ರತೆಗೆ ತಕ್ಕದಾದ ವಿಷಯಗಳನ್ನು ತಿಳಿದುಕೊಂಡು ಈ ಪ್ರಬಂಧ ಬರೆಯಲು ಪ್ರಯತ್ನಿಸಿದ್ದೇನೆ ಎಂಬ ನಂಬಿಗೆಯೊಂದಿಗೆ ಸಮಾರೋಪ ಮಾಡುತ್ತಿದ್ದೇನೆ.

# ಆಕರ ಗ್ರಂಥಗಳು


೧. ಅ.ನ.ಕೃಷ್ಣರಾಯ ೧೯೬೨ ಭಾರತೀಯ ಸಂಸ್ಕೃತಿ ದರ್ಶನ.

೨. ಎಚ್. ತಿಪ್ಪೆರುದ್ರಸ್ವಾಮಿ ೧೯೬೮ ಕರ್ನಾಟಕ ಸಂಸ್ಕೃತಿ ಸಮೀಕ್ಷೆ.

೩. ಆರ್. ಮುನಿಸ್ವಾಮಿ ೧೯೯೯ ಜಿಲ್ಲೆ ಗ್ಯಾಸೆಟಿಯರ್.

೪. ಚೂಡಾಮಣಿ ನಂದಗೋಪಾಲ ೨೦೦೭ ಶಿಲೆಕಲೆ

೫. ಶ್ರೀನಿವಾಸ ಪಾಡಿಗಾರ ೨೦೦೪ ಭಾರತೀಯ ಇತಿಹಾಸದ ಶಾಸನ-ಆಕಾರಗಳು

೬. ವಿಶ್ವನಾಥ ವಂಶಾಕೃತಮಠ ೨೦೦೭ ಶ್ರೀ ವಲ್ಲಭ-ಚಾಲುಕ್ಯರ ಉತ್ಸವ,
'ಡಾ॥ ಶೀಲಾಕಾಂತ ಪತ್ತಾರ

೭. ಎಂ. ಎಸ್. ಪ್ರಭಾಕರ್ ೨೦೦೧ ದೇವಾಲಯಗಳ ವಾಸ್ತು.

೮. ಸಿಂದಗಿ ರಾಜಶೇಖರ ೧೯೮೮ ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ ಸುಜಾತಾ ಪಬ್ಲಿಕೇಷನ್ಸ್

೯. ರಾಮಚಂದ್ರರಾವ್ ಎಸ್.ಕೆ. ೧೯೮೦ ಭಾರತದ ದೇವಾಲಯಗಳ ನೆಲೆ ಹಿನ್ನಲೆ ಪ್ರಸಾರಾಂಗ ಬೆಂಗಳೂರ ವಿ.ವಿ.ಬೆಂಗಳೂರ.

೧೦. ಕಲಬುರ್ಗಿ ಎಂ. ಎಂ. ೧೯೭೬ ವಿಜಾಪೂರ ಜಿಲ್ಲೆಯ ಶಾಸನಸೂಚಿ, ಧಾರವಾಡ.

೧೧. ಶಂಭು ಬಳಿಗಾರ ೧೯೮೬ ಹುನಗುಂದ ತಾಲೂಕ ದರ್ಶನ, ಬೆಂಗಳೂರು.

೧೨. ಅ. ಸುಂದರ ೧೯೭೧ ಇತಿಹಾಸ ಪೂರ್ವ ಕರ್ನಾಟಕದ ಪ್ರಾಗೈತಿಹಾಸ, ಧಾರವಾಡ

೧೩. ಬೆಳಗಲಿ ದು.ನಿಂ. ೧೯೮೬ ಜಮಖಂಡಿ ತಾಲೂಕು ದರ್ಶನ, ಬೆಂಗಳೂರು.

೧೪. ನಾಯಕ ಎಚ್.ಎಂ. ೧೯೭೯ ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ ಮೈಸೂರು,

೧೫. ಕೊಪ್ಪಾ. ಎಸ್.ಕೆ. ೧೯೮೮ ತರ್ದವಾಡಿನಾಡು ಒಂದು ಅಧ್ಯಯನ, ಧಾರವಾಡ

೧೬. 'ಗಿರಿಸಾಗರ ಐ.ವೈ. ೧೯೫೭ ಬಾಗಲಕೋಟ ತಾಲೂಕು ದರ್ಶನ, ಬೆಂಗಳೂರು.

೧೭. ಡಾ.ಎಚ್.ಆರ್.ರಘುನಾಥಭಟ್ ೧೯೭೭ ಕರ್ನಾಟಕ ಶಾಸನಕಲೆ, ಮೈಸೂರು

೧೮. ಅಣ್ಣಿಗೇರಿ ಎ. ಎಂ. ೧೯೭೭ ವಿಜಾಪೂರ ಶಿಲ್ಪಕಲಾ ವೈಭವ, ಧಾರವಾಡ

೧೯. ಗಣಪಾಕ್ ವಿ. ಕೆ. ೧೯೭೮ ಕಲೆಯ ನೆಲೆ ಮೈಸೂರು

೨೦. ಸಿಂದಗಿ ರಾಜಶೇಖರ ೧೯೮೮ ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ ಧಾರವಾಡ

೨೧. ಅಣ್ಣಿಗೇರಿ ಎ.ಎಂ. ೧೯೬೦ ಪಟ್ಟದಕಲ್ಲಿನ ಗುಡಿಗಳು ಧಾರವಾಡ

೨೨. ರಾಮಚಂದ್ರರಾವ್ ಎಸ್.ಕೆ. ೧೯೭೫ ಮೂರ್ತಿಶಿಲ್ಪ ನೆಲೆ ಹಿನ್ನಲೆ, ಬೆಂಗಳೂರು.

೨೩. ದೇಸಾಯಿ ಪಿ. ಬಿ. ೧೯೮೭ ಕನ್ನಡ ನಾಡಿನ ಶಾಸನಗಳು, ಧಾರವಾಡ.

೨೪. ಕಾರಂತ ಶಿವರಾಮ ಕೆ. ೧೯೭೫ ಭಾರತೀಯ ಶಿಲ್ಪ, ಬೆಂಗಳೂರು.

೨೫. ರಾಬರ್ಟ ಬ್ರೂಸ್ ಪೂಟ್ ೧೯೭೩ ಪುರಾತತ್ವ ನೆಲೆ ಶೋಧನೆ

೨೬. ಸಿದ್ಧರಾಜ ಪೂಜಾರಿ ಮತ್ತು ಜಯವಂತ ಕಾಡದೇವರ ೧೯೯೫ ಬೆಳವಲದ ಬೆಡಗು-ವಿಜಾಪೂರ ಜಿಲ್ಲಾ ದರ್ಶನ, ಬಾಗಲಕೋಟೆ

೨೭. 'ಡಾ॥ ಶ್ರೀನಿವಾಸ ಪಾಡಿಗಾರ ೧೯೮೮ "ಸೂರ್ಯ ಮತ್ತು ಬ್ರಹ್ಮ ಸೂಳೆಬಾವಿಯ ಬದಾಮಿ" ಚಾಲುಕ್ಯರ ಇಮಾರತಿನಲ್ಲಿ (ಇತಿಹಾಸ ದರ್ಶನ)

೨೮. ನಾಗೇಶ ನಿಲೂಗಲ್ ೧೯೯೭ "ಪಾರ್ಶ್ವವಾಯು ರೋಗ ನಿವಾರಿಸುವ ಬಸವತೀರ್ಥ" (ಕನ್ನಡನಾಡು ದಿನಪತ್ರಿಕೆ ಅಗಷ್ಟ -೧೩ / ೧೯೯೭)

೨೯. ಶ್ರೀ. ಹಾ.ಮಾ.ನಾಯಕ ಕನ್ನಡ ಸಾಹಿತ್ಯ ಚರಿತ್ರೆ -ಸಂ.೪, ಭಾಗ-೧, ಮೈಸೂರು ವಿ.ವಿ.

# ENGLISH BOOKS


| | | |
|---|---|---|
| 1. Satyan B.N. | 1966 | Mysore State Gazatteer, District, Bangalore |
| 2. Padmanabh. P | 1973 | Bijapur District Hand Book Govt. of Karnataka |
| 3. Harishchandraswami | 1981 | All about Hindu Temple, Mysore |
| 4. Kalpana S. Desai, | 1973 | Iconography of Vishnu-New-Delhi |
| 5. Nagaraja Rao. M.S. | 1978 | The Chalukyas of Badami (Seminar paper Bangalore) |
| 6. Bhattacharya, | 1968 | The Indian Buddhist Iconography, Calcutta. |
| 7. Altekar A.S. | 1998 | State and Govt. in ancient India.Motilal Banarasidas Publishers & Book Sellars New Dehli |
| 8. Aruni | 1960 | Decany Paintings, New Dehli. Publications, New Dehli. |
| 9. Basavaraj K.R | 1966 | Administrative System under the Chalukya's of Kalyana. |
| 10. Basavaraj K.R | 1984 | History & Culture of Karnataka early times to Unification. Chalukya Publications, Dharwar. |
| 11. Desai Dinakar, | 1981 | The Mahamandeshwar Under the Chalukya's of Kalyana & Culachuries. Unpublished Thesis, Karnataka University Dharwar. |
| 12. Desai P. B. | 1968 | Basaveshwar & His Times. Kannada Research Institute K.U.Dharwar. |
| 13. Gopal B. R. | 1981 | The Chalukya's of Karnataka & Kalachuri's. Prasanga Karnataka University, Dharwar. |
| 14. Katkar Ishwar, | 1982 | Art & Architecture of the Chalukya's of Kalyani. Doctoral Thesis, Karnataka University Dharwar. |
| 15. Pattar Iranna, | 1990 | Education in ancient Karnataka, from early times to end of Chalukya's of Kalyana. |


ಬಾಗಲಕೋಟೆ ಜಿಲ್ಲೆ
ಜಮಖಂಡಿ
ಮುಧೋಳ
ಬೀಳಗಿ
ಬಾಗಲಕೋಟೆ
ಹುನಗುಂದ
ಬದಾಮಿ

# ಅನುಬಂಧ-೨

## ::ಹುನುಗುಂದ ಪ್ರದೇಶದ ಶಿಲ್ಪಗಳ ಛಾಯಾ ಚಿತ್ರ ಸೂಚಿ ::

| | ಸ್ಥಳ | ದೇವಾಲಯಗಳು | ಶೈವಮೂರ್ತಿಗಳು |
|---|---|---|---|
| I) ೧) | ಗುಡೂರ ಎಸ್.ಸಿ. | ರಾಮಲಿಂಗೇಶ್ವರದೇವಾಲಯ | ಶಿವಲಿಂಗ |
| ೨) | ಗುಡೂರ ಎಸ್.ಸಿ. | ರಾಮಲಿಂಗೇಶ್ವರದೇವಾಲಯ | ನಂದಿ ವಿಗ್ರಹ |
| ೩) | ಗುಡೂರ ಎಸ್.ಸಿ. | ಹುಲ್ಲೇಶ್ವರ ದೇವಾಲಯ | ವೀರಭದ್ರೇಶ್ವರ ಮೂರ್ತಿ |
| ೪) | ಗುಡೂರ ಎಸ್.ಸಿ. | ಹುಲ್ಲೇಶ್ವರ ದೇವಾಲಯ | ಸೋಮೇಶ್ವರ ಶಿಲ್ಪ |
| ೫) | ಚಿತ್ತವಾಡಗಿ | ಬಸವೇಶ್ವರ ದೇವಾಲಯ | ನಂದಿ ವಿಗ್ರಹ |
| II) ೧) | ನಂದವಾಡಗಿ | ಮೂಕ ದೇವಾಲಯ | ಶಿವಲಿಂಗ |
| ೨) | ನಂದವಾಡಗಿ | ಮೂಕ ದೇವಾಲಯ | ನಂದಿ ವಿಗ್ರಹ |
| ೩) | ನಂದವಾಡಗಿ | ಸಂಗಮೇಶ್ವರ ದೇವಾಲಯ | ಶಿವಲಿಂಗ |
| ೪) | ನಂದವಾಡಗಿ | ಸಂಗಮೇಶ್ವರ ದೇವಾಲಯ | ನಂದಿ ವಿಗ್ರಹ |
| ೫) | ತಾರಿವಾಳ | ಬಸವೇಶ್ವರ ದೇವಾಲಯ | ಈಶ್ವರ ಲಿಂಗ |
| III) ೧) | ಕರಡಿ | ಬಸವೇಶ್ವರ ದೇವಾಲಯ | ನಂದಿ ವಿಗ್ರಹ |
| ೨) | ಕಂದಗಲ್ಲ | ವೀರಭದ್ರೇಶ್ವರ ದೇವಾಲಯ | ನೃತ್ಯಶಿವ |
| ೩) | ಕೂಡಲಸಂಗಮ | ಸಂಗಮೇಶ್ವರ ದ್ವಾರಬಾಗಿಲ | ಬಸವೇಶ್ವರ ಮೂರ್ತಿ |
| ೪) | ಕೂಡಲಸಂಗಮ | ಸಂಗಮೇಶ್ವರ ದೇವಾಲಯದ ಬಾಗಿಲ | ನೀಲಮ್ಮನ ಮೂರ್ತಿ |
| ೫) | ಕೂಡಲ ಸಂಗಮ | ಸಂಗಮೇಶ್ವರ ದೇವಾಲಯ | ಸಂಗಮೇಶ್ವರ ಮೂರ್ತಿ |
| IV) ೧) | ಸೋಮಲಾಪೂರ | ಬಸವೇಶ್ವರ ದೇವಾಲಯ | ನಂದಿವಿಗ್ರಹ |
| ೨) | ಸೂಳೇಭಾವಿ | ಸೊಲೇಶ್ವರ ದೇವಾಲಯ | ಈಶ್ವರ ಲಿಂಗ |
| ೩) | ಹೇರೂರು | ಸೋಮೇಶ್ವರ ದೇವಾಲಯ | ಸೋಮೇಶ್ವರ ಮೂರ್ತಿ |
| ೪) | ಹಿರೇಶಿಂಗನಗುತ್ತಿ | ಗೌರಮ್ಮ ದೇವಾಲಯ | ಗೌರಮ್ಮ ಶಿಲ್ಪ |
| ೫) | ಕರಡಿ | ಸಂಗಮೇಶ್ವರ ದೇವಾಲಯ | ಸಂಗಮೇಶ್ವರ ಶಿಲ್ಪ |
| V) ೧) | ಹುನಗುಂದ | ಸಂಗಮೇಶ್ವರ ದೇವಾಲಯ | ಸಂಗಮೇಶ್ವರ ಮೂರ್ತಿ |
| ೨) | ಹುನಗುಂದ | ರಾಮಲಿಂಗೇಶ್ವರ ದೇವಾಲಯ | ಶಿವಲಿಂಗ |
| ೩) | ಹೀರೆಶಿಂಗನಗುತ್ತಿ | ಮಲ್ಲಿಕಾರ್ಜುನ ದೇವಾಲಯ | ನಂದಿ ವಿಗ್ರಹ |
| ೪) | ಸೂಳೇಭಾವಿ | ಅಂಭಾಭವಾನಿ ದೇವಾಲಯ | ಅಂಭಾಭವಾನಿ ಮೂರ್ತಿ |
| ೫) | ಸೂಳೇಭಾವಿ | ಬನಶಂಕರಿ ದೇವಾಲಯ | ಬನಶಂಕರಿ ಮೂರ್ತಿ |

| | | | |
|---|---|---|---|
| VI) ೧) | ಹುನಗುಂದ | ವಿಠ್ಠಲದೇವಾಲಯ | ವಿಠ್ಠಲ -ರುಕ್ಮೀಣಿ ಶಿಲ್ಪ |
| ೨) | ಕಂದಗಲ್ಲ | ಶಂಕರಲಿಂಗ ದೇವಾಲಯ | ಶಿವನಮೂರ್ತಿ |
| ೩) | ಕಂದಗಲ್ಲ | ಸೋಮೇಶ್ವರ ದೇವಾಲಯ | ಗಜಲಕ್ಷ್ಮೀ |
| ೪) | ಕಂದಗಲ್ಲ | ವೀರಭದ್ರೇಶ್ವರ ದೇವಾಲಯ | ವೀರಭದ್ರೇಶ್ವರ ಮೂರ್ತಿ |
| ೫) | ಕಂದಗಲ್ಲ | ಈಶ್ವರ ದೇವಾಲಯ | ನಂದಿವಿಗ್ರಹ |
| ೧) | ಇಲಕಲ್ | ಮಲ್ಲಿಕಾರ್ಜುನ ದೇವಾಲಯ | ಮಲ್ಲಿಕಾರ್ಜುನ ಮೂರ್ತಿ |
| ೨) | ಇಲಕಲ್ | ಮಲ್ಲಿಕಾರ್ಜುನ ದೇವಾಲಯ | ಶಿವಪಾರ್ವತಿ ಮೂರ್ತಿ |
| ೩) | ಇಲಕಲ್ | ಮಲ್ಲಿಕಾರ್ಜುನ ದೇವಾಲಯ | ನಂದಿ ವಿಗ್ರಹ |
| ೪) | ಇಲಕಲ್ | ಬಸವೇಶ್ವರ ದೇವಾಲಯ | ನಂದಿ ವಿಗ್ರಹ |
| | **ಸ್ಥಳ** | **ದೇವಾಲಯ** | **ವೈಷ್ಣವ ಮೂರ್ತಿಗಳು** |
| VII) ೧) | ಹುನಗುಂದ | ಮುದು ಮಾರುತಿ ದೇವಾಲಯ | ಆಂಜನೇಯ ಮೂರ್ತಿ |
| ೨) | ಕರಡಿ | ಹನಮಂತ ದೇವಾಲಯ | ಗರುಡು ಮೂರ್ತಿ |
| ೩) | ತೂರಮರಿ | ಹನಮಂತ ದೇವಾಲಯ | ವೀರಾಂಜನೇಯ ಮೂರ್ತಿ |
| ೪) | ಕರಡಿ | ಜೈನ ಬಸದಿ ದೇವಾಲಯ | ಲಕ್ಷ್ಮೀ ನಾರಾಯಣ ಮೂರ್ತಿ |
| ೫) | ಹೀರೆಶಿಂಗನಗುತ್ತಿ | ಹನಮಂತ ದೇವಾಲಯ | ಆಂಜನೇಯ ಮೂರ್ತಿ |
| VIII) ೧) | ಚಿತ್ತವಾಡಗಿ | ಕಲ್ಲಪ್ಪನ ಗುಡಿ | ಲಕ್ಷ್ಮೀ ನಾರಾಯಣ ಮೂರ್ತಿ |
| ೨) | ನಂದವಾಡಗಿ | ಸಂಗಮೇಶ್ವರ ದೇವಾಲಯ | ವಿಷ್ಣು ಮೂರ್ತಿ |
| ೩) | ಹೇರೂರು | ಹನುಮಂತ ದೇವಾಲಯ | ಸೂರ್ಯ ಶಿಲ್ಪ |
| ೪) | ಸೋಮಲಾಪೂರ | ಹನುಮಂತ ದೇವಾಲಯ | ಆಂಜನೇಯ ಮೂರ್ತಿ |
| ೫) | ಹುನಗುಂದ | ರಾಮಲಿಂಗೇಶ್ವರ ದೇವಾಲಯ | ಗರುಡ ವಾಹನ ಚತುರ್ಥ(ವಿಷ್ಣು) |
| XI) ೧) | ಇಲಕಲ್ | ವೆಂಕೋಬ ದೇವಾಲಯ | ಲಕ್ಷ್ಮೀ ವೆಂಕಟರಮಣ ಮೂರ್ತಿ |
| ೨) | ಇಲಕಲ್ | ವೆಂಕೋಬ ದೇವಾಲಯ | ಅನಂತ ಶಾಹಿ ಮೂರ್ತಿ |
| ೩) | ಇಲಕಲ್ | ವೆಂಕೋಬ ದ್ವಾರದ ಬಾಗಿಲು | ಕೃಷ್ಣ ಲಿಲೆ ಶಿಲ್ಪಗಳು |
| ೪) | ಇಲಕಲ್ | ವೆಂಕೋಬ ದೇವಾಲಯ | ಗರುಡ ಮೂರ್ತಿ |
| ೫) | ಸೂಳೇಭಾವಿ | ಸೂಲೇಶ್ವರ ದೇವಾಲಯ | ಬ್ರಹ್ಮ ಶಿಲ್ಪ |
| | **ಸ್ಥಳ** | **ದೇವಾಲಯ** | **ಜೈನ ಮೂರ್ತಿಗಳು** |
| X)೧) | ಅರಿಸಿಬೀದಿ | ಜೈನ ಬಸಿದಿ | ದ್ವಾರಬಾಗಿಲ ಶಿಲ್ಪಗಳು |
| ೨) | ಅರಿಸಿಬೀದಿ | ಜೈನ ಬಸದಿ | ಗರ್ಭಗೃಹ ಜೈನಕೂಟ ಮೂರ್ತಿ |
| ೩) | ಅರಿಸಿಬೀದಿ | ಜೈನ ಬಸದಿ | ಯಕ್ಷಿಣಿ ಮೂರ್ತಿ |
| ೪) | ಅರಿಸಿಬೀದಿ | ಜೈನ ಬಸದಿ | ಜೈನ ಬಸದಿ ಮುಂಭಾಗ |
| ೫) | ಚಿನ್ನಾಪೂರ | ಗಾಂಧಿ ಸಂಘದ ಕೊಠಡಿ | ಪಾರ್ಶ್ವನಾಥ ಮೂರ್ತಿ |
| ೬) | ಕರಡಿ | ಜೈನ ಬಸದಿ | ಯಕ್ಷಿಣಿ ಶಿಲ್ಪ |
| ೭) | ಕರಡಿ | ಜೈನ ಬಸದಿ | ಜೈನ ಬಿಂಬ |

| | ಸ್ಥಳ | ದೇವಾಲಯಗಳು | ಗಣಪತ್ಯ ಮೂರ್ತಿಗಳು |
|---|---|---|---|
| XI) ೧) | ಇಲಕಲ್ | ವೆಂಕೋಬ ದೇವಾಲಯ | ನಾಗಮೂರ್ತಿ |
| ೨) | ತಾರಿವಾಳ | ಬಸವೇಶ್ವರ ದೇವಾಲಯ | ಗಜಲಕ್ಷ್ಮೀ ಶಿಲ್ಪ |
| ೩) | ಇಲಕಲ್ | ಹಳೇಬನಶಂಕರಿ ದೇವಾಲಯ | ಗರುಡ ಮೂರ್ತಿ |
| ೪) | ಗೂಡೂರ ಎಸ್.ಸಿ. | ಹುಲ್ಲೇಶ್ವರ ದೇವಾಲಯ | ಸಪ್ತ ಮಾತೃಕೆಯರು |
| ೫) | ಹುನಗುಂದ | ರಾಮಲಿಂಗೇಶ್ವರ ದೇವಾಲಯ | ಉಮಾ ಮಹೇಶ್ವರಿಗಣ ವೃಂದ |
| XII) ೧) | ಕಂದಗಲ್ಲ | ವೀರಭದ್ರೇಶ್ವರ ದೇವಾಲಯ | ನಾಗಮೂರ್ತಿ |
| ೨) | ಸೂಳೇಭಾವಿ | ಬನಶಂಕರಿ ದೇವಾಲಯ | ಕೇಸರಿ ಮೂರ್ತಿ |
| ೩) | ಹಿರೇಶಿಂಗನಗುತ್ತಿ | ಈಶ್ವರ ದೇವಾಲಯ | ನಾಗನಾಗಿಣಿ ಮೂರ್ತಿ |
| ೪) | ಸೂಳೇಭಾವಿ | ಬನಶಂಕರಿ ದೇವಾಲಯ | ಸ್ಥಾನಿಕ ಗಣೇಶ ಆವೆ ಮೂರ್ತಿ |
| XIII) ೧) | ಸೂಳೇಭಾವಿ | ಬನಶಂಕರಿ ದೇವಾಲಯ | ನವಗ್ರಹ ಶಿಲ್ಪಗಳು |
| ೨) | ಹಿರೇಶಿಂಗನಗುತ್ತಿ | ಮಲ್ಲಿಕಾರ್ಜುನ ದೇವಾಲಯ | ಸಪ್ತಮಾತೃಕೆ ಶಿಲ್ಪ |
| ೩) | ನಂದವಾಡಗಿ | ಮೂಖ ದೇವಾಲಯ | ನಾಗ ಶಿಲ್ಪ |
| ೪) | ತೂರಮರಿ | ಮಾರುತಿ ದೇವಾಲಯ | ಗಜ ಲಕ್ಷ್ಮೀ |
| ೫) | ಕರಡಿ | ನೆಲಗುಡಿ | ನಾಗಮೂರ್ತಿ |
| | **ಸ್ಥಳ** | **ದೇವಾಲಯಗಳು** | **ವೀರಗಲ್ಲುಗಳು** |
| XIV) ೧) | ಗೂಡೂರ ಎಸ್.ಸಿ. | ಹುಲ್ಲೇಶ್ವರ ದೇವಾಲಯ | ತ್ರಿಪಟ್ಟಿಕೆ ವೀರಗಲ್ಲು |
| ೨) | ಚಿತ್ತವಾಡಗಿ | ಹನಮಂತ ದೇವಾಲಯ | ತ್ರಿಪಟ್ಟಿಕೆ ವೀರಗಲ್ಲು |
| ೩) | ಗೂಡೂರ ಎಸ್.ಸಿ. | ಹುಲ್ಲೇಶ್ವರ ದೇವಾಲಯ | ಮಹಾಸತಿಗಲ್ಲು |
| ೪) | ಹಿರೇಶಿಂಗನಗುತ್ತಿ | ಮಾರುತಿ ದೇವಾಲಯ | ದ್ವಿಪಟ್ಟಿಕೆಯ ವೀರಗಲ್ಲು |
| ೫) | ತಾರಿವಾಳ | ಬಸವೇಶ್ವರ ದೇವಾಲಯ | ತ್ರಿಪಟ್ಟಿಕೆಯ ವೀರಗಲ್ಲು |
| XV) ೧) | ತಾರಿವಾಳ | ಬಸವೇಶ್ವರ ದೇವಾಲಯ | ಗೋ ಗ್ರಹಣ ವೀರಗಲ್ಲು |
| ೨) | ಕರಡಿ | ಬಸವೇಶ್ವರ ದೇವಾಲಯ | ದ್ವಿ ಪಟ್ಟಿಕೆಯ ವೀರಗಲ್ಲು |
| ೩) | ಕರಡಿ | ಬಸವೇಶ್ವರ ದೇವಾಲಯ | ತ್ರಿ ಪಟ್ಟಿಕೆ ವೀರಗಲ್ಲು |
| ೪) | ಕಂದಗಲ್ಲ | ವೀರಭದ್ರೇಶ್ವರ ದೇವಾಲಯ | ತ್ರಿ ಪಟ್ಟಿಕೆ ವೀರಗಲ್ಲು |
| ೫) | ನಂದವಾಡಗಿ | ಈಶ್ವರ ದೇವಾಲಯ | ಐದು ಪಟ್ಟಿಕೆ ವೀರಗಲ್ಲು |
| | **ಸ್ಥಳ** | **ದೇವಾಲಯಗಳು** | **ಶಾಕ್ತ ಮೂರ್ತಿಗಳು** |
| XVI) ೧) | ತುರಮರಿ | ಮಾರುತಿ ದೇವಾಲಯ | ಶಕ್ತಿ ದೇವತೆ |
| ೨) | ಹುನಗುಂದ | ರಾಮಲಿಂಗೇಶ್ವರ ದೇವಾಲಯ | ಮಹಿಷಾಸೂರ ಮರ್ದಿನಿ |
| ೩) | ಕರಡಿ | ಬಸವೇಶ್ವರ ದೇವಾಲಯ | ಸಪ್ತ ಮಾತೃಕೆಯರು |

| | | ಸ್ಥಳ | ದೇವಾಲಯಗಳು | ಇತರೆ ಮೂರ್ತಿಗಳು |
|---|---|---|---|---|
| XVII) | ೧) | ಕಂದಗಲ್ಲ | ವೀರಭದ್ರೇಶ್ವರ ದೇವಾಲಯ | ಗಜಶಿಲ್ಪ ಪಟ್ಟಿಕೆ |
| | ೨) | ಹಿರೇಶಿಂಗನಗುತ್ತಿ | ಈಶ್ವರ ದೇವಾಲಯ | ದೇವಾಲಯ ಶಿಖರ |
| | ೩) | ನಂದವಾಡಗಿ | ಮುಖ ದೇವಾಲಯ | ದ್ವಾರಪಾಲಕರ ಮೂರ್ತಿ |
| | ೪) | ನಂದವಾಡಗಿ | ಈಶ್ವರ ದೇವಾಲಯ | ಸಪ್ತ ಮಾತೃಕೆಯರು |
| | ೫) | ಕಂದಗಲ್ಲ | ಶಂಕರಲಿಂಗ ದೇವಾಲಯ | ಅಷ್ಟ ದಿಕ್ಪಾಲಕರು |

| | | ಸ್ಥಳ | ದೇವಾಲಯಗಳು | ಇತರೆ ಮೂರ್ತಿಗಳು |
|---|---|---|---|---|
| XVIII) | ೧) | ಕೂಡಲಸಂಗಮ | ಸಂಗಮೇಶ್ವರ ದೇವಾಲಯ | ಮದನಿಕ ವಿಗ್ರಹ |
| | ೨) | ಸೂಳೇಭಾವಿ | ಸೂಲೇಶ್ವರ ದೇವಾಲಯ | ಅಲಂಕೃತ ಸ್ತಂಭ |
| | ೩) | ಸೂಳೇಭಾವಿ | ಸೂಲೇಶ್ವರ ದೇವಾಲಯ | ಮದನಿಕ ವಿಗ್ರಹ |



ಗುಡೂರ ಎಸ್.ಸಿ. ರಾಮಲಿಂಗೇಶ್ವರ - ಶಿವಲಿಂಗ



ಗುಡೂರ ಎಸ್.ಸಿ. ರಾಮಲಿಂಗೇಶ್ವರ -ನಂದಿ ವಿಗ್ರಹ



ಗುಡೂರ ಎಸ್.ಸಿ.ಹುಲ್ಲೇಶ್ವರ - ವೀರಭದ್ರೇಶ್ವರ ಮೂರ್ತಿ



ಗುಡೂರ ಎಸ್.ಸಿ.ಹುಲ್ಲೇಶ್ವರ - ಸೋಮೇಶ್ವರ ಶಿಲ್ಪ



ಚಿತ್ತವಾಡಗಿ ಬಸವೇಶ್ವರ ದೇವಾಲಯ -ನಂದಿ ವಿಗ್ರಹ



ನಂದವಾಡಗಿ ಮೂಕ ದೇವಾಲಯ -ಶಿವಲಿಂಗ



ನಂದವಾಡಗಿ ಮೂಕ ದೇವಾಲಯ- ನಂದಿ ವಿಗ್ರಹ



ನಂದವಾಡಗಿ ಸಂಗಮೇಶ್ವರ ದೇವಾಲಯ- ಶಿವಲಿಂಗ.



ನಂದವಾಡಗಿ ಸಂಗಮೇಶ್ವರ ದೇವಾಲಯ-ನಂದಿ ವಿಗ್ರಹ



ತಾರಿವಾಳ ಬಸವೇಶ್ವರ ದೇವಾಲಯ-ಈಶ್ವರ ಲಿಂಗ



ಕರಡಿ ಬಸವೇಶ್ವರ ದೇವಾಲಯ - ನಂದಿ ವಿಗ್ರಹ



ಕಂದಗಲ್ಲ ವೀರಭದ್ರೇಶ್ವರ ದೇವಾಲಯ-ನೃತ್ಯಶಿವ



ಕೂಡಲಸಂಗಮ ಸಂಗಮೇಶ್ವರ ದ್ವಾರಬಾಗಿಲ -ಬಸವೇಶ್ವರ ಮೂರ್ತಿ



ಕೂಡಲಸಂಗಮ ಸಂಗಮೇಶ್ವರ -ನೀಲಮ್ಮನ ಮೂರ್ತಿ



ಕೂಡಲ ಸಂಗಮ ಸಂಗಮೇಶ್ವರ -ಸಂಗಮೇಶ್ವರ ಮೂರ್ತಿ



ಸೋಮಲಾಪೂರ ಬಸವೇಶ್ವರ -ನಂದಿವಿಗ್ರಹ



ಸೂಳೇಭಾವಿ ಸೊಲೇಶ್ವರ ದೇವಾಲಯ -ಈಶ್ವರ ಲಿಂಗ



ಹೇರೂರು ಸೋಮೇಶ್ವರ -ಸೋಮೇಶ್ವರ ಮೂರ್ತಿ



ಹಿರೇಶಿಂಗನಗುತ್ತಿ ಗೌರಮ್ಮ -ಗೌರಮ್ಮ ಶಿಲ್ಪ



ಕರಡಿ ಸಂಗಮೇಶ್ವರ ದೇವಾಲಯ- ಶಿವಲಿಂಗ



ಹುನಗುಂದ ಸಂಗಮೇಶ್ವರ ದೇವಾಲಯ-ಸಂಗಮೇಶ್ವರ ಮೂರ್ತಿ



ಹುನಗುಂದ ರಾಮಲಿಂಗೇಶ್ವರ -ಶಿವಲಿಂಗ, ನಂದಿವಿಗ್ರಹ



ಹಿರೇಶಿಂಗನಗುತ್ತಿ ಮಲ್ಲಿಕಾರ್ಜುನ ದೇವಾಲಯ-ನಂದಿ ವಿಗ್ರಹ



ಸೂಳೇಭಾವಿ ಅಂಭಾಭವಾನಿ ದೇವಾಲಯ-ಅಂಭಾಭವಾನಿ ಮೂರ್ತಿ



ಸೂಳೇಭಾವಿ ಬನಶಂಕರಿ ದೇವಾಲಯ-ಬನಶಂಕರಿ ಮೂರ್ತಿ



ಹುನಗುಂದ ವಿಠ್ಠಲದೇವಾಲಯ-ವಿಠ್ಠಲ -ರುಕ್ಮಿಣಿ ಶಿಲ್ಪ



ಕಂದಗಲ್ಲ ಶಂಕರಲಿಂಗ ದೇವಾಲಯ-ಶಿವನಮೂರ್ತಿ



ಕಂದಗಲ್ಲ ಸೋಮೇಶ್ವರ ದೇವಾಲಯ- ಗಜಲಕ್ಷ್ಮೀ



ಕಂದಗಲ್ಲ ವೀರಭದ್ರೇಶ್ವರ ದೇವಾಲಯ
ವೀರಭದ್ರೇಶ್ವರ ಮೂರ್ತಿ



ಕಂದಗಲ್ಲ ಈಶ್ವರ ದೇವಾಲಯ-ನಂದಿವಿಗ್ರಹ


ಇಲಕಲ್ ಮಲ್ಲಿಕಾರ್ಜುನ ದೇವಾಲಯ ಮಲ್ಲಿಕಾರ್ಜುನ ಮೂರ್ತಿ


ಇಲಕಲ್ ಮಲ್ಲಿಕಾರ್ಜುನ ದೇವಾಲಯ-ಶಿವಪಾರ್ವತಿ ಮೂರ್ತಿ


ಇಲಕಲ್ ಮಲ್ಲಿಕಾರ್ಜುನ ದೇವಾಲಯ-ನಂದಿ ವಿಗ್ರಹ


ಇಲಕಲ್ ಬಸವೇಶ್ವರ ದೇವಾಲಯ-ನಂದಿ ವಿಗ್ರಹ



ಹುನಗುಂದ ಮುದು ಮಾರುತಿ -ಆಂಜನೇಯ ಮೂರ್ತಿ



ಕರಡಿ ಹನಮಂತ ದೇವಾಲಯ -ಗರುಡು ಮೂರ್ತಿ



ತೂರಮರಿ ಹನಮಂತ ದೇವಾಲಯ

ವೀರಾಂಜನೇಯ ಮೂರ್ತಿ



ಕರಡಿ ಜೈನ ಬಸದಿ ದೇವಾಲಯ -ಲಕ್ಷ್ಮೀ ನಾರಾಯಣ ಮೂರ್ತಿ



ಹೀರೆಶಿಂಗನಗುತ್ತಿ ಹನಮಂತ ದೇವಾಲಯ -ಆಂಜನೇಯ ಮೂರ್ತಿ



ಚಿತ್ತವಾಡಗಿ ಕಲ್ಲಪ್ಪನ ಗುಡಿ
ಲಕ್ಷ್ಮೀ ನಾರಾಯಣ ಮೂರ್ತಿ



ನಂದವಾಡಗಿ ಸಂಗಮೇಶ್ವರ ದೇವಾಲಯ-ವಿಷ್ಣು ಮೂರ್ತಿ



ಕೂಡಲಸಂಗಮ ಸಂಗಮೇಶ್ವರ
ದೇವಾಲಯ ಮಹಿಷಾಸುರ ಮರ್ದಿನಿ



ಸೋಮಲಾಪೂರ ಹನುಮಂತ ದೇವಾಲಯ
ಆಂಜನೇಯ ಮೂರ್ತಿ



ಹುನಗುಂದ ರಾಮಲಿಂಗೇಶ್ವರ ದೇವಾಲಯ -ಗರುಡ ವಾಹನ ಚತುರ್ಥ(ವಿಷ್ಣು)



ಇಲಕಲ್ ವೆಂಕೋಬ ದೇವಾಲಯ -ಲಕ್ಷ್ಮೀ ವೆಂಕಟರಮಣ ಮೂರ್ತಿ



ಇಲಕಲ್  ವೆಂಕೋಬ ದೇವಾಲಯ-ಅನಂತ ಶಾಹಿ ಮೂರ್ತಿ



ಇಲಕಲ್ ವೆಂಕೋಬ ದ್ವಾರದ ಬಾಗಿಲು-ಕೃಷ್ಣಲಿಲೆ ಶಿಲ್ಪಗಳು



ಇಲಕಲ್  ವೆಂಕೋಬ ದೇವಾಲಯ-ಗರುಡ ಮೂರ್ತಿ



ಸೂಳೇಭಾವಿ ಸೂಲೇಶ್ವರ ದೇವಾಲಯ-ಬ್ರಹ್ಮ ಶಿಲ್ಪ



ಅರಿಸಿಬೀದಿ ಜೈನ ಬಸದಿ-ದ್ವಾರಬಾಗಿಲ ಶಿಲ್ಪಗಳು



ಅರಿಸಿಬೀದಿ ಜೈನ ಬಸದಿ-ಯಕ್ಷಿಣಿ ಮೂರ್ತಿ



ಅರಿಸಿಬೀದಿ ಜೈನ ಬಸದಿ-ಜೈನ ಬಸದಿ ಮುಂಭಾಗ



ಚಿನ್ನಾಪೂರ ಗಾಂಧಿ ಸಂಘದ ಕೊಠಡಿ-ಪಾರ್ಶ್ವನಾಥ ಮೂರ್ತಿ



ಕರಡಿ ಜೈನ ಬಸದಿ-ಜೈನ ಬಿಂಬ



ಇಲಕಲ್ ವೆಂಕೋಬ ದೇವಾಲಯ-ನಾಗಮೂರ್ತಿ



ತಾರಿವಾಳ ಬಸವೇಶ್ವರ ದೇವಾಲಯ -ಗಜಲಕ್ಷ್ಮೀ ಶಿಲ್ಪ



ಇಲಕಲ್ ಹಳೇಬನಶಂಕರಿ ದೇವಾಲಯ-ಗರುಡ ಮೂರ್ತಿ



ಗೂಡೂರ ಎಸ್.ಸಿ. ಹುಲ್ಲೇಶ್ವರ ದೇವಾಲಯ-ಸಪ್ತ ಮಾತೃಕೆಯರು



ಹುನಗುಂದ ರಾಮಲಿಂಗೇಶ್ವರ ದೇವಾಲಯ -ಉಮಾ ಮಹೇಶ್ವರಿಗಣ ವೃಂದ



ಕಂದಗಲ್ಲ ವೀರಭದ್ರೇಶ್ವರ ದೇವಾಲಯ-ನಾಗಮೂರ್ತಿ



ಸೂಳೇಭಾವಿ ಬನಶಂಕರಿ ದೇವಾಲಯ-ಕೇಸರಿ ಮೂರ್ತಿ



ಹಿರೇಶಿಂಗನಗುತ್ತಿ ಈಶ್ವರ ದೇವಾಲಯ-ನಾಗನಾಗಿಣಿ ಮೂರ್ತಿ



ಹಿರೇಶಿಂಗನಗುತ್ತಿ ಈಶ್ವರದೇವಾಲಯ -ಸ್ಥಾನಿಕ ಗಣೇಶ ಮೂರ್ತಿ



ಸೂಳೇಭಾವಿ ಬನಶಂಕರಿ ದೇವಾಲಯ -ಆಮೆ ಮೂರ್ತಿ



ಸೂಳೇಭಾವಿ ಬನಶಂಕರಿ ದೇವಾಲಯ-ನವಗ್ರಹ ಶಿಲ್ಪಗಳು



ಹಿರೇಶಿಂಗನಗುತ್ತಿ ಮಲ್ಲಿಕಾರ್ಜುನ ದೇವಾಲಯ-ಸಪ್ತಮಾತೃಕೆ ಶಿಲ್ಪ



ನಂದವಾಡಗಿ ಮೂಕ ದೇವಾಲಯ-ನಾಗ ಶಿಲ್ಪ



ತೂರಮರಿ ಮಾರುತಿ ದೇವಾಲಯ-ಗಜ ಲಕ್ಷ್ಮೀ



ಕರಡಿ ನೆಲಗುಡಿ -ನಾಗಮೂರ್ತಿ



ಗೂಡೂರ ಎಸ್.ಸಿ. ಹುಲ್ಲೇಶ್ವರ ದೇವಾಲಯ-
ತ್ರಿಪಟ್ಟಿಕೆ ವೀರಗಲ್ಲು



ಚಿತ್ತವಾಡಗಿ ಹನಮಂತ ದೇವಾಲಯ-ತ್ರಿಪಟ್ಟಿಕೆ ವೀರಗಲ್ಲು



ಗೂಡೂರ ಎಸ್.ಸಿ. ಹುಲ್ಲೇಶ್ವರ ದೇವಾಲಯ ಮಹಾಸತಿಗಲ್ಲು



ಹಿರೇಶಿಂಗನಗುತ್ತಿ ಮಾರುತಿ ದೇವಾಲಯ -ದ್ವಿಪಟ್ಟಿಕೆಯ ವೀರಗಲ್ಲು



ತಾರಿವಾಳ  ಬಸವೇಶ್ವರ ದೇವಾಲಯ-ತ್ರಿಪಟ್ಟಿಕೆಯ ವೀರಗಲ್ಲು



ತಾರಿವಾಳ ಬಸವೇಶ್ವರ ದೇವಾಲಯ-
ಗೋ ಗ್ರಹಣ ವೀರಗಲ್ಲು



ಕರಡಿ ಬಸವೇಶ್ವರ ದೇವಾಲಯ-ದ್ವಿಪಟ್ಟಿಕೆಯ ವೀರಗಲ್ಲು



ಕರಡಿ ಬಸವೇಶ್ವರ ದೇವಾಲಯ -
ತ್ರಿ ಪಟ್ಟಿಕೆ ವೀರಗಲ್ಲು



ನಂದವಾಡಗಿ ಈಶ್ವರ ದೇವಾಲಯ-ಐದು ಪಟ್ಟಿಕೆ ವೀರಗಲ್ಲು



ಕಂದಗಲ್ಲ ವೀರಭದ್ರೇಶ್ವರ ದೇವಾಲಯ -ತ್ರಿ ಪಟ್ಟಿಕೆ ವೀರಗಲ್ಲು



ತುರಮರಿ ಮಾರುತಿ ದೇವಾಲಯ-ಶಕ್ತಿ ದೇವತೆ



ಸೂಳೇಬಾವಿ ಸೋಲೇಶ್ವರ ದೇವಅಲಯ-ಮದನಿಕ ವಿಗ್ರಹ



ಹುನಗುಂದ ರಾಮಲಿಂಗೇಶ್ವರ ದೇವಾಲಯ-
ಮಹಿಷಾಸೂರ ಮರ್ದಿನಿ



ಕರಡಿ ಬಸವೇಶ್ವರ ದೇವಾಲಯ-ಸಪ್ತ ಮಾತೃಕೆಯರು


ಹಿರೇಶಿಂಗನಗುತ್ತಿ ಈಶ್ವರ ದೇವಾಲಯದೇವಾಲಯ- ಶಿಖರ


ನಂದವಾಡಗಿ ಮೂಖ ದೇವಾಲಯ-ದ್ವಾರಪಾಲಕರ ಮೂರ್ತಿ


ಕಂದಗಲ್ಲ ವೀರಭದ್ರೇಶ್ವರ ದೇವಾಲಯ -ಗಜಶಿಲ್ಪ ಪಟ್ಟಿಕೆ


ನಂದವಾಡಗಿ ಈಶ್ವರ ದೇವಾಲಯ -ಸಪ್ತ ಮಾತೃಕೆಯರು


ಸೂಳೇಭಾವಿ ಸೂಲೇಶ್ವರ ದೇವಾಲಯ-ಅಲಂಕೃತ ಸ್ತಂಭ